# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಮನುಷ್ಯನು ಭೂಮಿಯಲ್ಲಿ ಹುಟ್ಟಿ ಬೆಳೆದು ಪ್ರಾಯಕ್ಕೆ ಬಂದು ಮಾನವನಿಗೆ ತಕ್ಕ ಶಕ್ತಿಗಳನ್ನು ಹೊಂದಿದಾಗ, ತನ್ನ ಶಕ್ತಿ ಯೋಗ್ಯತೆಗಳಿಗೆ ತಕ್ಕಂತೆ ಕೈಲಾದ ವೃತ್ತಿ ಹಿಡಿದು ಧನ ಸಂಪಾದನೆಗೆ ಪ್ರಯತ್ನಿಸುತ್ತಾನೆ; ಪ್ರಯತ್ನಿಸಲೇಬೇಕು. ಕೆಲವರು ಅಧಿಕ ಸಂಪಾದನೆ ಮಾಡುವವರಾದರೆ ಕೆಲವರು ಸ್ವಲ್ಪ ಮಾತ್ರ ಸಂಪಾದಿಸುವವರಾಗಿಯೇ ಕಾಲ ತಳ್ಳಬೇಕಾಗುತ್ತದೆ. ಪ್ರತಿಯೊಬ್ಬನೂ ವೃತ್ತಿಧರ್ಮ ಪಾಲಿಸಬೇಕೆಂಬುದನ್ನು "ಸ್ವಯಂ ಕೃತಾಪರಾಧ" ಎಂಬ ಈ ಸಂಚಿಕೆಯ ಒಂದು ಕಥೆ ನಿರೂಪಿಸುತ್ತದೆ.

## ಅಮರವಾಣಿ

ಶ್ರೋತವ್ಯ ಮುಕ್ತಮನ್ಯೇನ ಶ್ರುತ್ವಾ ಸಮ್ಯಗ್ವಿಚಾರಯೇತ್,
ವಿಚಾರೇಣೈವ ಕರ್ತವ್ಯಂ ಸತ್ಯಾಸತ್ಯವಿನಿರ್ಣಯಃ

ಯಾರು ಯಾವ ವಿಷಯವನ್ನು ಹೇಳಿದರೂ ಪೂರ್ತಿಯಾಗಿ ಕೇಳಬೇಕು. ಕೇಳಿದ ವಿಷಯಗಳನ್ನು ಕುರಿತು ಚೆನ್ನಾಗಿ ಆಲೋಚಿಸಿದ ಮೇಲೆಯೇ ಸತ್ಯಾಸತ್ಯತೆಗಳನ್ನು ನಿರ್ಣಯಿಸಬೇಕು.

ಸಂಪುಟ : ೭೭ ಏಪ್ರಿಲ್ '೮೭ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦



## ಚಂದಮಾಮನ ಹರಟೆ



### ಕುಜಗ್ರಹ ಯಾತ್ರೆ !

ಇಪ್ಪತ್ತು ವರ್ಷಗಳ ಹಿಂದೆ ವೆರ್ನ್‌ಹರ್‌ವಾನ್‌ಬ್ರಾನ್ ಎಂಬ ಶಾಸ್ತ್ರಜ್ಞನು ೧೯೮೪ ನೇ ಸಂವತ್ಸರದ ಕಾಲದಲ್ಲಿ ಮನುಷ್ಯನು ಕುಜಗ್ರಹಕ್ಕೆ ಹೋಗಬಲ್ಲನೆಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದನು. ಅದು ನಿಜವಾಗಲಿಲ್ಲ. ಆದರೆ ಅಮೆರಿಕಾಕ್ಕೆ ಸೇರಿದ ನೇಷನಲ್ ಏರೋನಾಟಿಕ್ಸ್ ಅಂಡ್ ಸ್ಪೇಸ್ ಅಡ್ಮಿನಿಸ್ಟ್ರೇಷನ್ (ನಾಸಾ) ಸಂಸ್ಥೆ ೧೯೯೦ ಕ್ಕೆ ಮನುಷ್ಯನಿಲ್ಲದ ವ್ಯೋಮ ನೌಕೆಯನ್ನು ಕುಜಗ್ರಹಕ್ಕೆ ಕಳುಹಿಸಲು ಕೃಷಿ ಮಾಡಿಕೊಂಡಿದೆ.

### ಪ್ರಾಚೀನ ಭಾರತ ದೇಶದಲ್ಲಿ ಅಕ್ಯುಪಂಕ್ಚರ್



ಸೂಜಿಗಳಿಂದ ಚುಚ್ಚಿ ವ್ಯಾಧಿಗಳನ್ನು ಗುಣಪಡಿಸುವ ಅಕ್ಯುಪಂಕ್ಚರ್ ಚಿಕಿತ್ಸೆ ಪುರಾತನ ಭಾರತ ದೇಶದಲ್ಲಿಯೇ ಪ್ರಾರಂಭವಾಯಿತೆಂದು ಅಲಹಾಬಾದಿನ ಇಂಡಿಯನ್ ಅಕ್ಯುಪಂಕ್ಚರ್ ಸೆಂಟರ್ ಡೈರೆಕ್ಟರ್ ಡಾ॥ ಪಿ. ಕೆ. ಸಿಂಗ್ ಅಭಿಪ್ರಾಯಪಡುತ್ತಾರೆ. ಇತ್ತೀಚೆಗೆ ಬೀಜಿಂಗ್‌ನಲ್ಲಿ ನಡೆದ ಒಂದು ಸದಸ್ಸಮಾವೇಶದಲ್ಲಿ ಡಾ॥ ಸಿಂಗ್ ಉಪನ್ಯಾಸ ಕೊಡುತ್ತ, ಭೀಷ್ಮನು ಶರತಲ್ಪದ ಮೇಲೆ ೫೮ ದಿನಗಳು ಮಲಗಿ ನಿರ್ಣಯಿಸಲ್ಪಟ್ಟ ದಿನ ದೇಹ ಬಿಟ್ಟುದನ್ನು ಒಂದು ಉದಾಹರಣೆಯಾಗಿ ಹೇಳುತ್ತಾರೆ.



### ಟೂತ್ ಪೇಸ್ಟ್ ಆಹಾರ

ಅಮೆರಿಕಾಕ್ಕೆ ಸೇರಿದ ಜೂಡೀ ಪ್ಯಾಟ್ರ್ಸ್‌ನ್ ಎಂಬ ೨೭ ವರ್ಷಗಳ ವನಿತೆ ಹಡಗು ಪ್ರಯಾಣ ಮಾಡುತ್ತ, ತಪ್ಪಿಹೋಗಿ ಇಂಡೋನೇಷಿಯಾ ಸಮುದ್ರ ತೀರದಲ್ಲಿ ೨೧ ದಿನಗಳನ್ನು ಕಳೆಯಬೇಕಾಗಿ ಬಂತು. ಆಗ ಆಕೆ ತನ್ನ ಹತ್ತಿರ ವಿದ್ದ ಒಂದು ಟ್ಯೂಬ್ ಟೂತ್ ಪೇಸ್ಟನ್ನು ಸ್ವಲ್ಪ ಸ್ವಲ್ಪವೇ ತಿಂದು ಪ್ರಾಣ ಉಳಿಸಿಕೊಂಡಳು.

## ನಿಮಗೆ ಗೊತ್ತೇ?

೧. ಸಾಧಾರಣವಾಗಿ ಮಾನವ ಶರೀರದಲ್ಲಿ ನಾಡಿ ಬಡಿಯುವುದು ನಿಮಿಷಕ್ಕೆ ಎಷ್ಟು ಸಾರಿ ?

೨. ಮೊತ್ತಮೊದಲು ಶಸ್ತ್ರಚಿಕಿತ್ಸೆಯ ಮೂಲಕ ಮನುಷ್ಯನ ಗುಂಡಿಗೆಯ ಬದಲಾವಣೆ ಯಾವಾಗ ನಡೆಯಿತೆಂದು ಗೊತ್ತಿದೆಯೆ ?

೩. ಮನುಷ್ಯನ ಮೆದುಳಿನ ಸರಾಸರಿ ಪರಿಮಾಣವು ಎಷ್ಟೆಂದು ನಿಮಗೆ ತಿಳಿದಿದೆಯೆ ?

೪. ರಕ್ತದೊಳಗಿನ ಕೆಂಪು ಕಣಗಳು ಎಷ್ಟು ಕಾಲ ಜೀವದಲ್ಲಿರುತ್ತವೆಂದು ಹೇಳಬಲ್ಲಿರಾ ?

೫. ಅಲೆಗ್ಝಾಂಡರ್ ಫ್ಲೇಮಿಂಗ್ ಏಕೆ ಸುಪ್ರಸಿದ್ಧ ರೆನಿಸಿದರು ?

(ಉತ್ತರ ೬೫ ನೇ ಪುಟದಲ್ಲಿ)

# ಅಲಂಬುಸೆ

**ದೇ**ವೇಂದ್ರನ ಆಸ್ಥಾನದ ಅಪ್ಸರೆಯರಲ್ಲಿ ಅಲಂಬುಸೆಯೂ ಒಬ್ಬಳು. ಒಂದು ದಿನ ಅವಳು ತನ್ನ ಪ್ರಿಯನಾದ ವಿದೂಷಕನೆಂಬ ಗಂಧರ್ವನೊಡನೆ ಮಾತಾಡಿಕೊಂಡಿರಲು, ಆ ಕಡೆಗೆ ಬಂದ ದೇವೇಂದ್ರನನ್ನು ಗಮನಿಸದೆ ಹೋದಳು. ಅದರಿಂದ ದೇವೇಂದ್ರನು, ಕೋಪದಿಂದ, "ನೀವಿಬ್ಬರೂ ಭೂಲೋಕದಲ್ಲಿ ಮಾನವರಾಗಿ ಹುಟ್ಟಿ ಗಂಡಹೆಂಡಿರಾಗಿ ಜೀವಿಸಿರಿ" ಎಂದು ಶಾಪ ಕೊಟ್ಟನು.

ಆ ಶಾಪ ಪ್ರಭಾವದಿಂದ ವಿದೂಷಕನು ಕೌಶಾಂಬಿಯ ಯುವರಾಜನಾಗಿ ಸಹಸ್ರಾನೀಕನೆಂಬ ಹೆಸರಿನಿಂದಲೂ, ಅಲಂಬುಸೆ ಮೃಗವತಿ ಎಂಬ ಹೆಸರಿನಿಂದಲೂ ಹುಟ್ಟಿದರು. ಅವರಿಬ್ಬರೊಳಗೆ ಮದುವೆಯ ನಿಶ್ಚಯವೂ ಆಯಿತು. ಆ ಸಮಯದಲ್ಲಿ ದೇವದಾನವರಿಗೆ ಯುದ್ಧವು ವಿಜೃಂಭಿಸಿಕೊಂಡುದರಿಂದ ದೇವೇಂದ್ರನು ಸಹಸ್ರಾನೀಕನ ಸಹಾಯವನ್ನು ಕೇಳಿದನು. ಸಹಸ್ರಾನೀಕನು ದೇವತೆಗಳ ಪಕ್ಷ ವಹಿಸಿ, ರಾಕ್ಷಸರನ್ನು ಸೋಲಿಸಿ ಭೂಲೋಕಕ್ಕೆ ಹಿಂದಿರುಗಿ ಬರುವಾಗ, ದೇವೇಂದ್ರನು ಅವನಿಗೆ ಜತೆಯಾಗಿ ತಿಲೋತ್ತಮೆಯನ್ನು ಕಳುಹಿಸಿದನು. ಸಹಸ್ರಾನೀಕನು ರಥದಲ್ಲಿ ಬರುತ್ತ, ಮೃಗವತಿಯ ನೆನಪಿನಿಂದ, ತಿಲೋತ್ತಮೆ ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದೆ ಸುಮ್ಮನಿದ್ದನು. ಆಗ ಕೋಪಿಸಿದ ತಿಲೋತ್ತಮೆ "ನೀನು ಯಾರ ಮೇಲಿನ ಧ್ಯಾನದಿಂದ ನನ್ನ ಪ್ರಶ್ನೆಗೆ ಉತ್ತರ ಹೇಳಲಿಲ್ಲವೋ ಅವರಿಂದ ನಿನಗೆ ಹದಿನಾಲ್ಕು ವರ್ಷಗಳವರೆಗೆ ವಿಯೋಗವಾಗಲಿ" ಎಂದು ಶಪಿಸಿದಳು.

ಸಹಸ್ರಾನೀಕನು ಕೌಶಾಂಬಿಯನ್ನು ಸೇರಿ ಮೃಗವತಿಯನ್ನು ಮದುವೆ ಮಾಡಿಕೊಂಡನು. ಅವಳು ಗರ್ಭಿಣಿಯಾಗಿದ್ದಾಗ, ಒಂದು ದಿನ ಗಂಡನೊಂದಿಗೆ, ಪರಿಮಳದ ನೀರು ತುಂಬಿದ ಕೆಂಪಗಿನ ಕೊಳದಲ್ಲಿ ಸ್ನಾನ ಮಾಡಬೇಕೆಂಬ ತನ್ನ ಅಪೇಕ್ಷೆಯನ್ನು ಹೇಳಿದಳು.

ಹಾಗೆಯೇ ಮೃಗವತಿ ಕೆಂಪಗಿನ ಪರಿಮಳದ ಕೊಳದಲ್ಲಿ ಸ್ನಾನ ಮಾಡುವಾಗ, ಅವಳನ್ನು ನೋಡಿ ರಕ್ತ ತಟಾಕದ ಮಾಂಸದ ಮುದ್ದೆಯೆಂದು ಭ್ರಮಿಸಿ ಒಂದು ದೊಡ್ಡ ಹದ್ದು ಥಕ್ಕನೆ ಬಂದು ಅವಳನ್ನು ಎತ್ತಿಕೊಂಡು ಹೋಯಿತು. ಸಹಸ್ರಾನೀಕನು ದೊಡ್ಡ ದುಃಖಕ್ಕೆ ಬಿದ್ದನು.

ಹದ್ದು ಮೃಗಾವತಿಯನ್ನು ದೂರದಲ್ಲಿದ್ದೊಂದು ಬೆಟ್ಟದ ಶಿಖರದಲ್ಲಿ ಬಿಟ್ಟಿತು. ಮುನಿ ಕುಮಾರನೊಬ್ಬನು ಅವಳನ್ನು ಜಮದಗ್ನಿಯ ಆಶ್ರಮಕ್ಕೆ ಕರೆದೊಯ್ದನು. ಅಲ್ಲಿ ಅವಳು ಉದಯನನೆಂಬ ಮಗನನ್ನು ಹಡೆದಳು.

ಹದಿನಾಲ್ಕು ವರ್ಷ ಕಳೆದ ಮೇಲೆ ಒಂದು ದಿನ ಹಾವಾಡಿಗನೊಬ್ಬನು ಒಂದು ಹಾವನ್ನು ಹಿಡಿಯುವುದನ್ನು ಬಾಲಕ ಉದಯನನು ನೋಡಿದನು. ಹಾವು ತಪ್ಪಿಸಿಕೊಳ್ಳಲು ಚಡಪಡಿಸುವುದನ್ನು ನೋಡಿ, ಉದಯನನು ಕನಿಕರಪಟ್ಟು, ಹಾವಾಡಿಗನಿಗೆ ಒಂದು ಚಿನ್ನದ ನಾಣ್ಯವನ್ನು ಕೊಟ್ಟು, ಹಾವನ್ನು ಬಿಟ್ಟುಬಿಡಲು ಹೇಳಿದನು. ಹಾವಾಡಿಗನು ಆ ಚಿನ್ನದ ನಾಣ್ಯವನ್ನು ಕೌಶಾಂಬಿ ನಗರಕ್ಕೆ ಹೋಗಿ ಮಾರುವಾಗ, ಅದು ತನ್ನ ರಾಣಿಯದೆಂದು ಸಹಸ್ರಾನೀಕನಿಗೆ ತಿಳಿಯಿತು. ಅವನು ಹಾವಾಡಿಗನನ್ನು ಕರೆದುಕೊಂಡು ಜಮದಗ್ನಿಯ ಆಶ್ರಮಕ್ಕೆ ಹೋಗಿ ಹೆಂಡತಿಯನ್ನೂ, ಮಗನನ್ನೂ ನೋಡಿದನು. ಆಮೇಲೆ ಅವರೊಂದಿಗೆ ಸುಖ ಸಂತೋಷದಿಂದ ಕಾಲ ಕಳೆದನು.







# ಹೊಂದುವ ಅಳಿಯ

**ಹಿಂದೆ** ವೀರಭದ್ರರಾಯರೆಂಬ ಜಮೀನ್ದಾರರೊಬ್ಬರಿದ್ದರು. ಅವರಿಗೆ ಬಹಳ ಕಾಲ ಮಕ್ಕಳಿಲ್ಲದೆ, ಕಡೆಗೆ ಒಬ್ಬಳು ಕುಮಾರಿ ಹುಟ್ಟಿದಳು. ಜಮೀನ್ದಾರರು ಅಪರೂಪಕ್ಕೆ ಹುಟ್ಟಿದ ಮಗಳಿಗೆ ಸುಪ್ರಿಯಾ ಎಂದು ಹೆಸರಿಟ್ಟು ಅತ್ಯಂತ ಮುದ್ದಿನಿಂದ ಬೆಳೆಸಿದರು. ಬೆಳೆಯುತ್ತಾ ಬಂದಂತೆ ಸುಪ್ರಿಯಳು ಓದು ಬರೆಹಗಳನ್ನು ಮನಸಿಟ್ಟು ಚೆನ್ನಾಗಿ ಕಲಿಯುತ್ತಾ ಬಂದಳು. ಆದರೆ ಚಿಕ್ಕಂದಿನಿಂದಲೂ ಹುಚ್ಚುಚ್ಚಾಗಿ ಮಾತಾಡುವ ಗುಣ ಮಾತ್ರ ಸ್ವಲ್ಪವೂ ತಗ್ಗಲಿಲ್ಲ. ಪ್ರತಿ ಸಣ್ಣ ವಿಷಯದಲ್ಲಿ ಕೂಡಾ ಏನೇನೋ ಒಗಟಿನಂತೆ ಹೇಳುವ ಗುಣ ಮಾತ್ರ ಹೋಗಲೇ ಇಲ್ಲ. ಹೀಗಾದರೆ ಇವಳ ಮಾತನ್ನು ಕೇಳುವವರು ಏನೆಂದುಕೊಂಡಾರು ?

ತನ್ನ ಮಗಳು ಒಳ್ಳೆಯ ತಿಳುವಳಿಕೆಯ ಬುದ್ಧಿಯುಳ್ಳವಳೆಂದು ಜಮೀನ್ದಾರರಿಗೆ ಗೊತ್ತಿತ್ತು. ಅದೇನೋ ಸಂತೋಷದಾಯಕವಾಗಿದ್ದರೂ, ಅವಳು ಒಗಟಿನಂತೆ ಮಾತಾಡುವ ಗುಣ ಮಾತ್ರ ಅವರನ್ನು ರೇಗಿಸುತ್ತಿತ್ತು; ಬೇಸರ ಬರಿಸುತ್ತಿತ್ತು, ಚಿಂತೆಗೀಡು ಮಾಡುತ್ತಿತ್ತು.

ಸುಪ್ರಿಯಳಿಗೆ ಮದುವೆಯ ವಯಸ್ಸು ಬಂದಿತು. ಅವಳಿಗೆ ತಕ್ಕವನಾಗಿರುವ ಗಂಡನನ್ನು ಹುಡುಕಲು ಜಮೀನ್ದಾರರು ಪ್ರಯತ್ನ ಮಾಡಲು ತೊಡಗಿದರು. ಅವರ ದೊಡ್ಡತನಕ್ಕೆ ತಕ್ಕ ಕುಟುಂಬಗಳಲ್ಲಿ ಕೆಲವು ಮಂದಿ ಯುವಕರೇನೋ ಇದ್ದರು. ಅವರಲ್ಲಿ ಅನೇಕರು ದುರ್ವ್ಯಸನಗಳಿಗೂ ದುರಭ್ಯಾಸಗಳಿಗೂ ಪಳಗಿದಂತಹವರು. ಬೇರೆ ಒಬ್ಬಿಬ್ಬರು ವರ ಯುವಕರ ತಂದೆಯರು ಹುಡುಗಿ ಕೇಳಲು ಬಂದರೆ, ಅವರು ತಮ್ಮ ಹಣಕ್ಕೆ ಆಶೆಪಟ್ಟು ಬಂದರೆಂದು ಅವರ ಮಾತುಗಳಿಂದ ಸುಪ್ರಿಯಳಿಗೆ ಗೊತ್ತಾದುದರಿಂದ ಅವಳೇ ಬೇಡವೆಂದು ನಿರಾಕರಿಸಿ ಬಿಟ್ಟಳು.

ಕಡೆಗೆ ಜಮೀನ್ದಾರರು ನಿರಾಶರಾಗಿ, "ನಿನಗೆ ಎಂತಹ ಗಂಡ ಬೇಕೆಂದು ನನಗೆ ಅರ್ಥವಾಗುವುದಿಲ್ಲಮ್ಮ" ಎಂದರು.

"ಅಪ್ಪಾ, ನಾನು ಪ್ರಾಮಾಣಿಕನಾದ ತಿಳುವಳಿಕೆಯುಳ್ಳ ಬುದ್ಧಿವಂತನನ್ನೇ ಮದುವೆಯಾಗುತ್ತೇನೆ" ಎಂದಳು ಸುಪ್ರಿಯಾ.

"ನಿನ್ನನ್ನು ಪೋಷಿಸುವ ತಂದೆಯಾದ ನಾನೂ ಕೂಡಾ ಅಂಥವನೇ ಆಗಬೇಕೆಂದು ಬಯಸು

ಎಂ. ಡಿ. ಸೌಜನ್ಯ



ತ್ತೇನಮ್ಮಾ. ಆದರೆ ಮದುವೆಯಾಗುವೆನೆಂದು ಬಂದವನಲ್ಲಿ ಆ ಲಕ್ಷಣಗಳು ಇವೆಯೋ ಇಲ್ಲವೋ ಎಂಬುದನ್ನು ಹೇಗೆ ತಿಳಿದುಕೊಳ್ಳುವುದು ? " ಎಂದು ಕೇಳಿದರು ಜಮೀನ್ದಾರರು.

"ಅಪ್ಪಾ, ನನಗೊಂದು ಪರೀಕ್ಷೆಯಿದೆ. ನನ್ನನ್ನು ಕೇಳಲು ಬರುವ ವರನು ನಾನು ನಿಗೂಢವಾಗಿ ಮಾತಾಡುವ ಮಾತುಗಳ ಅರ್ಥ ತಿಳಿದುಕೊಳ್ಳು ವವರಾಗಿರಬೇಕು. ಆಗ ನಮ್ಮ ಇಚ್ಛೆಗೆ ತಕ್ಕ ವರನು ಅವನೇ ಎಂದು ತಿಳಿಯಬಹುದು" ಎಂದಳು ಸುಪ್ರಿಯ.

ಇಲ್ಲಿ ಹೀಗಿರುವಾಗ ಸುಬುದ್ಧಿ ಎಂಬ ಯುವಕನು ವೀರಭದ್ರರಾಯರ ಮನೆಗೆ ಬಂದನು. ಅವನು ಒಬ್ಬ ಜಮೀನ್ದಾರನ ಮಗನೇ ಆದರೂ ಪ್ರಸ್ತುತ ಆ ಜಮೀನ್ದಾರಿಕೆಯ ಪರಿಸ್ಥಿತಿ ಬಹಳ ಹೀನ ವಾಗಿತ್ತು. ಅವನು ವೀರಭದ್ರರಾಯರ ದಿವಾಣದಲ್ಲಿ ತನಗೇನಾದರೂ ಒಂದು ಉದ್ಯೋಗ ಕೊಡಬೇಕೆಂದು ಕೇಳಲು ಬಂದಿದ್ದನು. ಅವನ ಮಾತಿನ ರೀತಿಯೂ, ರೂಪವೂ ಜಮೀನ್ದಾರರಿಗೆ ಹಿಡಿಸಿದುದರಿಂದ ಅವನನ್ನು ತಮ್ಮ ಸ್ವಂತ ಸಹಾಯಕನನ್ನಾಗಿ ಕೆಲಸ ದಲ್ಲಿ ಸೇರಿಸಿಕೊಂಡರು.

ಸುಬುದ್ಧಿ ಜಮೀನ್ದಾರರ ಮನೆಯಲ್ಲಿ ಸೇರಿದಂದಿ ನಿಂದಲೂ ಸುಪ್ರಿಯಳು ಅವನನ್ನು ಗಮನಿಸಿಕೊಂಡೇ ಇದ್ದಳು. ಜಮೀನಿಗೆ ಸಂಬಂಧಿಸಿದ ಆದಾಯ ವ್ಯಯಗಳ ಲೆಕ್ಕಗಳನ್ನು ಬರೆಯಲು ಸುಕೇತು ಎಂಬವ ನೊಬ್ಬನಿದ್ದನು. ಅವನು ತಪ್ಪು ಲೆಕ್ಕ ಬರೆದು ಹಣ ವನ್ನು ಅಪಹರಿಸುವನೆಂಬ ಸಂದೇಹವು ತಂದೆಗೂ ಮಗಳಿಗೂ ಇದ್ದಿತು. ಆದರೆ ಅದನ್ನು ರುಜುಪಡಿಸಿ ಕೊಳ್ಳಲು ಯಾವ ಆಧಾರವೂ ಸಿಕ್ಕದುದರಿಂದ ಅವರು ಸುಮ್ಮನಿರಬೇಕಾಗಿತ್ತು.

ಒಂದು ದಿನ ಜಮೀನ್ದಾರರೂ, ಸುಬುದ್ಧಿಯೂ ಕೂಡಿಕೊಂಡು ಪಕ್ಕದ ಊರಿಗೆ ಹೋಗಬೇಕಾದ ಕೆಲಸ ಬಂದಿತ್ತು. ಆ ಊರಿಗೆ ಗಾಡಿಯಲ್ಲಿ ಹೋಗಲು ಸರಿಯಾದ ಬೀದಿ ಇರಲಿಲ್ಲ. ಕಾಲ್ನಡಿಗೆಯಿಂದಲೇ ಹೋಗಬೇಕಾಗಿತ್ತು. ಅವರು ಪ್ರಯಾಣಕ್ಕೆ ಹೊರಡು ವಾಗ ಸುಪ್ರಿಯಾ, ಇಬ್ಬರನ್ನೂ ಉದ್ದೇಶಿಸಿ, "ಆದಿ ಪ್ರಯಾಣಿಕರ ಹಾಗೆ ದಾರಿ ಭಾರವಾಗದಂತೆ ಹೋಗುತ್ತ, ಈ ಪಾತ್ರದಲ್ಲಿರುವುದನ್ನು ಅರ್ಧರ್ಧ ತಿನ್ನಿರಿ" ಎಂದು ಹೇಳಿ ಒಂದು ಗಂಟನ್ನು ಕೊಟ್ಟಳು. ಅದೊಂದು ಊಟದ ಪದಾರ್ಥಗಳಿರುವ ಅಡಕು ಪಾತ್ರಗಳ ಗಂಟೆಂದು ಇಬ್ಬರಿಗೂ ಗೊತ್ತಾಯಿತು. ಸುಬುದ್ಧಿಯೇ ಅದನ್ನು ಎತ್ತಿಕೊಂಡನು.

ಹಸಿವೆಯಾದಾಗ ತಿನ್ನಲು ತಿಂಡಿ ಪದಾರ್ಥ ಕಟ್ಟಿಕೊಟ್ಟು ಕಳುಹಿಸಬೇಕಾದವಳು. ಬಾಯಿಗೆ ಬಂದಂತೆ ಹರಟುವವಳೇಕೋ ಎಂದು ಜಮೀನ್ದಾರರು ಗೊಣಗುತ್ತ ಮೆಟ್ಟಿಲಿಳಿದರು.

ಅದಕ್ಕೆ ಸುಬುದ್ಧಿ, "ನಿಮ್ಮ ಮಗಳು ಬಾಯಿಗೆ ಬಂದಂತೆ ಹರಟಿದ್ದಲ್ಲ ಸ್ವಾಮಿ. ಆದಿ ಪ್ರಯಾಣಿಕ

ರೆಂದರೆ ಸೂರ್ಯಚಂದ್ರರು. ದಾರಿ ಭಾರವಾಗದಂತೆ ಅಂದರೆ ನಡೆಯುವ ಕಷ್ಟ ತಿಳಿಯದ ಹಾಗೆ ಮಾತು ಕತೆಯಾಡಿಕೊಂಡು ಇಬ್ಬರೂ ಹೋಗಬೇಕೆಂದು ಒಳ್ಳೆಯ ಹಿತವಾದ ಅರ್ಥವಿದೆ ಆ ಮಾತಿನಲ್ಲಿ" ಎಂದನು. ಅದನ್ನು ಕೇಳಿ ಸುಪ್ರಿಯಳಿಗೂ ಸಂತೋಷವಾಯಿತು. ಜಮೀನ್ದಾರರೂ ಆಶ್ಚರ್ಯ ದಿಂದ ತಲೆದೂಗಿದರು.

ಮತ್ತೊಂದು ದಿನ ಸುಬುದ್ಧಿ ಸುಪ್ರಿಯಳಿಗಾಗಿ ಕಾಡಿಗೆ ಹೋಗಿ, ಅಲ್ಲಿರುವ ಬೇಡ ಜಾತಿಯವರನ್ನು ಕೇಳಿ, ಜೇನು, ಪುನುಗು ಮುಂತಾದ ಬೆಲೆಬಾಳುವ ವಸ್ತುಗಳನ್ನು ತರಬೇಕಾಯಿತು.

ಅವನು ಆ ಕೆಲಸಕ್ಕೆ ಹೊರಡುವ ಮೊದಲು ಸುಪ್ರಿಯ, ಒಂದು ಬಾವು ಕತ್ತಿಯಂತಹ ಆಯುಧ ವನ್ನು ಅವನಿಗೆ ಕೊಟ್ಟು, "ಒಬ್ಬರೇ ಹೋಗು ವಿರಿ. ಈ ಕತ್ತಿಯ ಸಹಾಯದಿಂದ ಒಂದು ಕುದುರೆಯನ್ನು ಮಾಡಿಕೊಂಡು ಜಾಗ್ರತೆಯಾಗಿ ಹೋಗಿಬನ್ನಿ" ಎಂದಳು.

ಮಗಳು ಹೇಳಿದುದನ್ನು ಕೇಳಿ ಜಮೀನ್ದಾರರು ಅರ್ಥವಾಗದೆ ತಲೆಯಾಡಿಸುತ್ತ "ಅವನು ಹೋಗುವ ದಾರಿ ಗುಡ್ಡಗಾಡು ಪ್ರಾಂತ. ಇಕ್ಕಟ್ಟಾದ, ಮುಳ್ಳು ಕಲ್ಲುಗಳ ನಡುವಿನ ಕಾಲು ದಾರಿ. ನಡೆಯುವುದೇ ಕಷ್ಟ. ಕುದುರೆ ಹೇಗೆ ಹೋದೀತು? ಕುದುರೆಗೂ ಕತ್ತಿಗೂ ಏನು ಸಂಬಂಧ?" ಎಂದರು.

ಸುಪ್ರಿಯಾ ಸುಬುದ್ಧಿಯ ಮುಖ ನೋಡಿದಳು. "ಅಂದರೆ ಈ ಕತ್ತಿಯಿಂದ ಮರದ ಕೊಂಬೆಯನ್ನು ಕಡಿದು ಅದನ್ನು ಬಲವಾದ ಕೈಕೋಲಾಗಿ ಮಾಡಿ ಕೊಳ್ಳಬೇಕು. ಅದರ ಸಹಾಯದಿಂದ ನಡೆಯುವುದು ಸುಲಭವಾಗುತ್ತದೆ. ಆ ಕೈಕೋಲೇ ಇಂಥ ಪ್ರಯಾಣಕ್ಕೆ ತಕ್ಕ ಕುದುರೆಯೆಂದು ಅರ್ಥ" ಎಂದನು ಸುಬುದ್ಧಿ ಅರ್ಥವಾದವನಂತೆ.



ಮತ್ತೆ ಕೆಲವು ದಿನಗಳ ಮೇಲೆ ಜಮೀನ್ದಾರರ ಗುಮಾಸ್ತನಾದ ಸುಕೇತು, ದೊಡ್ಡ ಅಟ್ಟಹಾಸದಿಂದ ತನ್ನ ತಂಗಿಗೆ ಮದುವೆ ಮಾಡಿದನು. ಮದುವೆಯ ಔತಣಕ್ಕೆ ಬರಬೇಕೆಂದು ಜಮೀನ್ದಾರರನ್ನೂ, ಸುಪ್ರಿಯಳನ್ನೂ, ಪ್ರತ್ಯೇಕವಾಗಿ ಕರೆದನು. ಊರವ ರನ್ನೂ ಕರೆದಿದ್ದನು.

ಆಗ ಸುಪ್ರಿಯಾ ಸುಕೇತುವನ್ನು ನೋಡಿ, "ನಿಮ್ಮ ತಂಗಿಯ ಮದುವೆ ಬಹಳ ವೈಭವದಿಂದ ಮಾಡಿದ ಹಾಗಿದೆ. ನಿಮ್ಮ ಮನೆ ಬುನಾದಿ ಗಟ್ಟಿ ಯಾಗಿದೆಯೇ?" ಎಂದು ಕೇಳಿದಳು.

ಆ ಪ್ರಶ್ನೆಗೆ ಸುಕೇತು "ಅಮ್ಮಾ. ನನ್ನದು ಹತ್ತಾರು ಮಡಲು ಹೊಚ್ಚಿದ ಹುಲ್ಲುಮನೆ. ಅದಕ್ಕೆ ಬುನಾದಿಯೆಲ್ಲಿಯದು?" ಎಂದನು.

ಆ ಸಮಯದಲ್ಲಿ ಸುಬುದ್ಧಿ ಅಲ್ಲಿರಲಿಲ್ಲ. ಸುಪ್ರಿಯಾ ತಂದೆಯೊಂದಿಗೆ, "ಅಪ್ಪಾ, ನಾನು ಸುಕೇತುವಿನೊಂದಿಗೆ ಆತನ ಆರ್ಥಿಕ ಪರಿಸ್ಥಿತಿಯನ್ನು



ವಿಚಾರಿಸಿದೆ. ಅವನದು ಕಳ್ಳ ಬುದ್ಧಿಯೆಂಬ ಅನುಮಾನವೇ ಗಟ್ಟಿಯಾಗಿದೆ. ಆ ಸಂಗತಿಯನ್ನು ಸುಬುದ್ಧಿಯ ಮೂಲಕ ಸ್ಪಷ್ಟಪಡಿಸುತ್ತೇನೆ. ಅದಕ್ಕೊಂದು ಉಪಾಯವಿದೆ" ಎಂದಳು.

ಒಂದು ವಾರದ ಮೇಲೆ ಕೊಯ್ಲಿನ ಸಮಯದಲ್ಲಿ ಧಾನ್ಯದ ರಾಶಿ ಹೇಗೆ ಬೀಳುವುದೆಂದು ತಿಳಿಯಲು ಸುಬುದ್ಧಿಯೂ ಜಮೀನ್ದಾರರೂ ಹೊಲದ ಕಡೆಗೆ ಹೋದರು. ಊಟದ ವೇಳೆಯಲ್ಲಿ ಸುಪ್ರಿಯಾ ಸುಕೇತುವನ್ನು ಕರೆದಳು. ಅವನ ಕೈಗೆ ಅಡಕು ಪಾತ್ರಗಳ ಒಂದು ಮೂಟೆಯನ್ನು ಕೊಟ್ಟು "ಮೇಲ್ಮಾಳಿಗೆಯಲ್ಲಿ ಪೂರ್ಣಚಂದ್ರನಿದ್ದಾನೆ. ಕೆಳಗಿನ ಮಾಳಿಗೆಯಲ್ಲಿ ನಾಲ್ಕೆರಡು ಗಾರುಡಿಯಿವೆ. ಊರಲ್ಲಿ ಕಳ್ಳರ ಭಯವಲ್ಲವೇ? ನಾಲ್ಕು ದಿಕ್ಕುಗಳನ್ನು ಜಾಗ್ರತೆಯಾಗಿ ನೋಡಿದರೆ ಕಳ್ಳನನ್ನು ಹಿಡಿಯಬಹುದು. ನಾನು ಹೇಳಿದ ಈ ಮಾತುಗಳನ್ನು ಸುಬುದ್ಧಿಗೆ ಹೇಳಿಬಿಡಿ" ಎಂದಳು.

ಭೋಜನ ಪಾತ್ರಗಳ ಮೂಟೆಯನ್ನು ತೆಗೆದುಕೊಂಡು ಹೊಲಕ್ಕೆ ಹೋದ ಸುಕೇತುವಿಗೆ ದಾರಿಯಲ್ಲಿ ಒಂದು ಸಂಶಯ ಉಂಟಾಯಿತು. ಸುಪ್ರಿಯಳಿಗೆ ಸುಬುದ್ಧಿಯ ಮೇಲೆ ಆದರಾಭಿಮಾನಗಳು ಹೆಚ್ಚುತ್ತಾ ಬರುವುದರಿಂದಲೇ ಹೀಗೆಲ್ಲಾ ಹುಚ್ಚುಚ್ಚು ಹೇಳುತ್ತಾಳೆ. ಇವನ ರೀತಿ ನೋಡಿದರೆ ಬಹುಶಃ ಇದು ಮದುವೆಯವರೆಗೆ ಹೋಗಿ ಮುಟ್ಟುವುದೇನೋ? ತಾನು ಅಷ್ಟೊಂದು ಪ್ರೀತಿಸುವ ಸುಬುದ್ಧಿಗೆ ಅವಳು ಎಂತಹ ಬೆಲೆಬಾಳುವ ತಿಂಡಿಗಳನ್ನು ಇಟ್ಟಿದ್ದಾಳೋ? ನೋಡಿಬಿಡಬೇಕೆಂದು ಅವನಿಗೆ ತೋರಿತು.

ಅವನು ಮೂಟೆಯನ್ನು ಬಿಚ್ಚಿ ಆರು ಪಾತ್ರಗಳನ್ನು ತೆಗೆದು ನೋಡಿದನು. ಪದಾರ್ಥಗಳ ಸುವಾಸನೆಯಿಂದ ಅವನ ಬಾಯಿಯಲ್ಲಿ ಜೊಲ್ಲಿಳಿಯಿತು. ಯಾರಿಗೂ ಅನುಮಾನ ಬಾರದಂತೆ ಪಾತ್ರಗಳಲ್ಲಿದ್ದ ಪದಾರ್ಥಗಳನ್ನು ಸ್ವಲ್ಪ ಸ್ವಲ್ಪ ತೆಗೆದು ತಿಂದು ರುಚಿ ನೋಡಿ, ಮತ್ತೆ ಮೊದಲಿದ್ದ ಹಾಗೆಯೇ ಇಟ್ಟು ಮೂಟೆಕಟ್ಟಿ ತೆಗೆದುಕೊಂಡು ಹೋಗಿ ಸುಬುದ್ಧಿಯ ಕೈಗೆ ಕೊಟ್ಟನು.

ಸುಬುದ್ಧಿ ಮೂಟೆ ಬಿಚ್ಚಿ ಒಂದರ ಮೇಲೊಂದಾಗಿದ್ದ ಪಾತ್ರಗಳನ್ನು ಒಂದೊಂದೇ ತೆಗೆದಿಡುವಾಗ ಸುಕೇತು ನಗುತ್ತ ಅವನೊಂದಿಗೆ ಸುಪ್ರಿಯಳು ಹೇಳಿದ ಮಾತುಗಳನ್ನು ಹೇಳಿದನು. ಪಕ್ಕದಲ್ಲಿ ನಿಂತಿದ್ದ ಜಮೀನ್ದಾರರಿಗೆ ಅದೇನೂ ಅರ್ಥವಾಗಲಿಲ್ಲ. ಆದರೆ ಸುಬುದ್ಧಿ ಪಾತ್ರಗಳನ್ನು ಪರೀಕ್ಷಿಸಿ ಸುಕೇತುವನ್ನು ನೋಡಿ, "ನಿಮ್ಮ ಕಳ್ಳಬುದ್ಧಿಯನ್ನು ಪರೀಕ್ಷಿಸಲಿಕ್ಕೆ ಗೂಡಾರ್ಥವ ಮಾತುಗಳನ್ನು ನನಗೆ ಹೇಳುವಂತೆ ನಿಮ್ಮೊಂದಿಗೆ ಹೇಳಿದ್ದಾಳೆ. ನಿಮ್ಮದು ಕಳ್ಳಬುದ್ಧಿಯೇ ನಿಜ. ಪಾತ್ರಗಳಲ್ಲಿರುವ ಪದಾರ್ಥಗಳಲ್ಲಿ ಸ್ವಲ್ಪ ಸ್ವಲ್ಪ ತಿಂದಿರುವಿರಿ. ದಿವಾಣದಲ್ಲಿ ಲೆಕ್ಕ ಬರೆಯುವಾಗಲೂ ದೊಡ್ಡ ಕಳ್ಳತನವನ್ನೇ

ಮಾಡುತ್ತಿರಬೇಕು ನೀವು. ನಿಜ ಹೇಳಿಬಿಡಿ !" ಎಂದು ಗಟ್ಟಿಯಾಗಿ ಹೇಳಿ, ಗದರಿಸುವ ಮುಖ ಭಾವದಿಂದ ಅವನನ್ನು ದುರುಗುಟ್ಟಿ ನೋಡಿದನು.

ಸುಕೇತುವಿಗೆ ಏನೂ ಅರ್ಥವಾಗದೆ, ಗಾಬರಿ ಯಿಂದ ನೋಡುತ್ತಿದ್ದಂತೆ, ಸುಬುದ್ಧಿ ಪುನಃ "ಮೇಲ್ಮಾಳಿಗೆಯಲ್ಲಿ ಹುಣ್ಣಿಮೆಯ ಚಂದ್ರನೆಂದರೆ ಮೇಲಿನ ಪಾತ್ರದಲ್ಲಿ ಕೆನೆಯೊಂದಿಗೆ ಕೂಡಿದ ಗಟ್ಟಿ ಯಾದ ಬಿಳೀ ಮೊಸರು ಎಂದು ಅರ್ಥ. ಕೆಳಗಿನ ಮಾಳಿಗೆಯಲ್ಲಿ ನಾಲ್ಕೆರಡು ಗಾರುಡಿಗಳೆಂದರೆ ಆರು ಗಾರಿಗೆಗಳೆಂದು ಹೇಳಿದ್ದಾಳೆ. ಈಗ ಐದೇ ಇವೆ. ನಾಲ್ಕು ದಿಕ್ಕುಗಳನ್ನು ಜಾಗ್ರತೆಯಿಂದ ನೋಡುವು ದೆಂದರೆ ಉಳಿದ ನಾಲ್ಕು ಪಾತ್ರಗಳನ್ನೂ ಪರೀಕ್ಷಿಸಿದರೆ ಕಳ್ಳ ಸಿಕ್ಕಿ ಬೀಳುತ್ತಾನೆಂದು ಅರ್ಥ !" ಎಂದನು.

ಸುಕೇತು ಹೆದರುವ ಲಕ್ಷಣ ನೋಡುತ್ತಿದ್ದ ಜಮೀನ್ದಾರರಿಗೆ ಅವನು ಕಳ್ಳನೇ ನಿಜವೆಂಬ ನಂಬುಗೆ ಯುಂಟಾಯಿತು.

ಅವರು ಅವನನ್ನು ಕೋಪದಿಂದ ನೋಡುತ್ತ, "ಬಾ ಕೋತ್ವಾಲನ ಬಳಿಗೆ ಹೋಗೋಣ. ಅವನೇ ನಿನ್ನಿಂದ ಲೆಕ್ಕದ ಸತ್ಯವನ್ನು ಕಕ್ಕಿಸುತ್ತಾನೆ !" ಎಂದರು.

ಕೋತ್ವಾಲನ ಹೆಸರು ಕೇಳಿದ ಕೂಡಲೇ ಸುಕೇತು ವಿಗೆ ಕೊರಡೇ ಪೆಟ್ಟುಗಳ ನೆನಪು ಬಂದಿತು. ಅದ ರೊಂದಿಗೆ ತನ್ನ ಕಳ್ಳ ಲೆಕ್ಕಗಳನ್ನು ಕಂಡುಹಿಡಿದೇ ಹೀಗೆ ಮಾಡಿದ್ದಾರೆಂದು ತಿಳಿಯಿತು. ಅವನು ನಡುಗುತ್ತ ದಢೀಲನೆ ಜಮೀನ್ದಾರರ ಕಾಲಿಗೆ ಬಿದ್ದು, "ಅಯ್ಯಾ, ಕ್ಷಮಿಸಿ, ಬುದ್ಧಿಕೆಟ್ಟು ಏನೋ ತಪ್ಪು ಲೆಕ್ಕ ಬರೆದು ತಮ್ಮ ಧನವನ್ನು ಅಪಹರಿಸಿದ್ದೇ ನೆಂಬುದು ನಿಜವೇ. ಖರ್ಚು ಮಾಡಿದ್ದೆಲ್ಲಾ ಹೋಗ ಲಾಗಿ, ಉಳಿದಿರುವುದನ್ನೆಲ್ಲಾ ತಂದುಕೊಡುತ್ತೇನೆ ಸ್ವಾಮಿ !" ಎಂದು ಗೋಗರೆದು ಬೇಡಿದನು.

ಜಮೀನ್ದಾರರು ಅವನನ್ನು ಕ್ಷಮಿಸಿ ಬಿಟ್ಟು ಬಿಟ್ಟರು. ತರುವಾಯ ಜಮೀನ್ದಾರರು ಮುಂದಾಗಿ ಮನೆಗೆ ಹಿಂದಿರುಗಿ, ನಡೆದ ಸಮಾಚಾರವನ್ನೆಲ್ಲಾ ಮಗಳೊಂದಿಗೆ ಹೇಳಿ, "ಸುಬುದ್ಧಿಯ ವಿಷಯದಲ್ಲಿ ನಿನ್ನ ಅಭಿಪ್ರಾಯವೇನಮ್ಮ ? ಆ ಹುಡುಗ ಒಳ್ಳೆಯ ಬುದ್ಧಿವಂತನೇ ಅಲ್ಲದೆ, ಪ್ರಾಮಾಣಿಕನಾಗಿಯೂ ಕಾಣುತ್ತಾನೆ" ಎಂದರು.

"ನನ್ನ ಅಭಿಪ್ರಾಯವೂ ಅದೇ ಅಪ್ಪಾ. ನಿಮ್ಮ ಅಳಿಯನಾಗುವ ಅರ್ಹತೆಗಳೆಲ್ಲಾ ಅವರಲ್ಲಿವೆ" ಎಂದಳು ಆನಂದದಿಂದ ಸುಪ್ರಿಯಾ.

ಮಗಳ ಉತ್ತರವನ್ನು ಕೇಳಿ ಜಮೀನ್ದಾರರು ಮುಗುಳುನಗು ಸೂಸಿಕೊಂಡು, ಒಂದು ತಿಂಗ ಳೊಳಗೆ, ಸುಪ್ರಿಯಾ–ಸುಬುದ್ಧಿಯರ ವಿವಾಹವನ್ನು ಬಹು ವೈಭವದಿಂದ ನೆರವೇರಿಸಿದರು.





# ಉತ್ತಮ ಗಾಯಕ

**ಹಿಂ**ದೆ ಒಮ್ಮೆ ಶಿಳ್ಳಂಗೇರಿ ಪ್ರಾಂತವನ್ನು ಆಳಿಕೊಂಡಿದ್ದ ರಾಜನಿಗೆ, ತನ್ನ ಆಸ್ಥಾನದಲ್ಲಿ ಕವಿ ಪಂಡಿತರೂ ವಸ್ತಾದಿಗಳೂ ಇರುವ ಹಾಗೆಯೇ ಒಬ್ಬ ಗಾಯಕನೂ ಇದ್ದರೆ ಸಭೆಯು ಗೌರವ ತುಂಬಿ ಬರುತ್ತದೆಂದು ತೋರಿತು. ಈ ತನ್ನ ಅಭಿಪ್ರಾಯವನ್ನು ಮಂತ್ರಿಯೊಂದಿಗೆ ಹೇಳಿದನು. ಮಂತ್ರಿಯ ಆಲೋಚನೆಯಂತೆ ಉತ್ತಮ ಗಾಯಕನನ್ನು ಆರಿಸಲು ಸಂಗೀತ ಸ್ಪರ್ಧೆಯನ್ನು ಏರ್ಪಡಿಸಬೇಕೆಂದು ನಿರ್ಣಯಿಸಲ್ಪಟ್ಟಿತು. ಆಗ ಮಂತ್ರಿಗೆ ಒಂದು ಮುಖ್ಯ ವಿಷಯದಲ್ಲಿ ಸಂದೇಹ ಬಂತು.

"ಆದರೆ ಮಹಾರಾಜಾ, ಈ ಸ್ಪರ್ಧೆಯಲ್ಲಿ ನ್ಯಾಯನಿರ್ಣಯ ಮಾಡುವವರು ಯಾರು? ಆದರಲ್ಲಿ ನಿಷ್ಪಕ್ಷಪಾತವಾಗಿ ಹೇಳುವಂಥ ಸಂಗೀತ ಜ್ಞಾನಿ ಯಾರೆಂದು ನೋಡಬೇಕು. ಆಸ್ಥಾನ ಗಾಯಕನನ್ನು ಆರಿಸಲು ಅದು ಗೊತ್ತಾಗಬೇಕಷ್ಟೆ?" ಎಂದನು ಮಂತ್ರಿ.

"ಅದಕ್ಕೆ ಬೇರೆ ಯಾರು ಏತಕ್ಕೆ? ನಾನೂ ರಾಣಿಯೂ, ನೀವೂ ಸಹ ಸಂಗೀತ ಪ್ರಿಯರು ತಾನೇ? ನ್ಯಾಯ ನಿರ್ಣಾಯಕರಾಗಿ ನಾವು ಮೂವರೂ ಇದ್ದರೆ ಸಾಕು. ನಾವು ಮೂವರಿಗೆ ಒಪ್ಪಿಗೆಯಾದವನು ತಿಳಿದರೆ ಆಯಿತಲ್ಲ? ಒಬ್ಬನನ್ನು ಆರಿಸಿಕೊಳ್ಳಬಹುದು. ಇದಕ್ಕಾಗಿ ಬೇರೆ ವಿದ್ವಾಂಸನನ್ನು ಹುಡುಕುವ ಕಷ್ಟವೇ ಬೇಡ" ಎಂದನು ರಾಜ.

ರಾಜನು ಸಂಗೀತಪ್ರಿಯನೆಂಬುದು ನಿಜವಾದರೂ ಶಾಸ್ತ್ರೀಯವಾದ ಸಂಗೀತಜ್ಞಾನ ಅವನಿಗಿರಲಿಲ್ಲ. ಕಿವಿಗೆ ಇಂಪಾಗಿ ಕೇಳುವ ಸ್ವರಗಳೆಲ್ಲಾ ಅವನಿಗೆ ಚೆನ್ನಾಗಿಯೇ ಇರುತ್ತದೆ. ಆದರೆ ರಾಣಿಗೆ ಮಾತ್ರ ಒಳ್ಳೆಯ ಸಂಗೀತಜ್ಞಾನವಿದ್ದಿತು.

ರಾಜಾಜ್ಞೆಯಂತೆ ಮಂತ್ರಿ ದೇಶದೊಳಗಿನ ಸಂಗೀತ ವಿದ್ವಾಂಸರನ್ನೂ, ಸಾಮಾನ್ಯ ಪ್ರಜೆಗಳನ್ನೂ ಆಹ್ವಾನಿಸಿ, ನಿರ್ಣಯಿಸಲ್ಪಟ್ಟ ದಿನದಲ್ಲಿ ಸಂಗೀತ ಕಚೇರಿಗೆ ಏರ್ಪಾಡು ಮಾಡಿದನು.

ಸಂಗೀತ ಸ್ಪರ್ಧೆ ಮೂರು ದಿನಗಳ ವರೆಗೆ ನಡೆಯಿತು. ದೊಡ್ಡ ಗೌರವಪ್ರದವಾದ ಆಸ್ಥಾನ ಗಾಯಕ ಪದವಿ ಪಡೆಯಬೇಕೆಂಬ ಹಟದಿಂದ ಗಾಯಕರು ತಮ್ಮ ತಮ್ಮ ಪ್ರಜ್ಞೆ ಪ್ರತಿಭೆಗಳನ್ನು ಪೂರ್ಣವಾಗಿ ಪ್ರಕಟಪಡಿಸಿ ಹಾಡಿದರು. ಅನೇಕ ಸಂಗೀತ ವಿದ್ವಾಂಸರ ಗಾಯನ ನಡೆಯಿತು.

ಕೆ. ಕೆ. ಅಯ್ಯರ್

ಕಡೆಗೆ ಆ ಸಂಗೀತ ವಿದ್ವಾಂಸರಲ್ಲಿ ರಾಜನು ಮುರಳೀನಾಥನೆಂಬ ಗಾಯಕನನ್ನು, ಮಹಾರಾಣಿ ವೇಣುನಾಥನೆಂಬ ಸಂಗೀತ ವಿದ್ವಾಂಸನನ್ನು, ಮಂತ್ರಿ ಸುಸಂಗೀತನೆಂಬ ಗಾಯನಕಾರನನ್ನು ಆರಿಸಿದರು. ಅವರೊಳಗೆ ಆಸ್ಥಾನ ವಿದ್ವಾಂಸನ ಪದವಿಗೆ ತಕ್ಕವನು ಯಾರು ?

ರಾಜನು ತನ್ನ ಆರಿಕೆಯನ್ನು ಸಮರ್ಥಿಸುತ್ತ, "ಮುರಳೀನಾಥನು ಬಹಳ ಶ್ರಾವ್ಯವಾಗಿ ಹಾಡಿದ್ದಾನೆ. ಅವನ ಕಂಠಸ್ವರ ಅದ್ಭುತ. ಅವನ ಹಾಡಿನಿಂದ ನನಗೆ ಮೈಮರೆತು ಹೋಗಿದೆ. ಅಷ್ಟೊಂದು ಸುಶ್ರಾವ್ಯವಾಗಿ ನೀವು ಆರಿಸಿದವರು ಹಾಡಲಿಲ್ಲ. ಸಾಕ್ಷಾತ್ ಸರಸ್ವತಿಯೇ ಅವನ ಕಂಠದಲ್ಲಿ ವಾಸವಾಗಿದ್ದಾಳೆನ್ನಬಹುದು " ಎಂದನು.

ಅದಕ್ಕೆ ರಾಣಿ, "ಮುರಳೀನಾಥನೆಂದೇನು, ಸುಸಂಗೀತನೂ ಚೆನ್ನಾಗಿಯೇ ಹಾಡಿದ್ದಾನೆ. ಆದರೆ ಅವರಿಬ್ಬರಿಗೂ ಸಂಗೀತದಲ್ಲಿ ಆಳವಾದ ಜ್ಞಾನವೇನೂ ಇಲ್ಲ. ಅದಿಲ್ಲದವನು ನಿಜವಾದ ವಿದ್ವಾಂಸನೆನಿಸಿಕೊಳ್ಳಲಾರನು. ಆದರಿಂದಲೇ ನಾನು ವೇಣುನಾಥನು ಮೇಲಾದವನೆಂದು ಆರಿಸಿದ್ದೇನೆ " ಎಂದಳು.

ಆಗ ರಾಜನು ಮಂತ್ರಿಯನ್ನು ನೋಡಿ, "ನೀವು ಸುಸಂಗೀತನನ್ನು ಆರಿಸಿದುದರಲ್ಲಿರುವ ಅಂತರ್ಯವೇನೆಂದು ವಿವರಿಸಿ ಹೇಳಬೇಕು " ಎಂದನು.

"ಮಹಾರಾಜಾ, ಸುಸಂಗೀತನಿಗೆ ಶಾಸ್ತ್ರಜ್ಞಾನ ಮಾತ್ರವೇ ಅಲ್ಲದೆ ಸುಶ್ರಾವ್ಯವಾಗಿ ಹಾಡುವಂತಹ ಕುಶಲತೆಯೂ ಇದೆ. ಗಾಯಕನಾದವನು ಪಂಡಿತರನ್ನೂ, ಪಾಮರರನ್ನೂ ಸಮಾನವಾಗಿಯೇ ರಂಜಿಸಬೇಕು. ಆ ಸಾಮರ್ಥ್ಯ ಸುಸಂಗೀತನೊಬ್ಬನಿಗೇ ಇದೆ. ಇದು ನನ್ನೊಬ್ಬನ ಅಭಿಪ್ರಾಯವೇನೂ ಅಲ್ಲ. ಈ ವಿಷಯದಲ್ಲಿ ಪಂಡಿತರೂ ಪಾಮರರೂ ನನ್ನೊಡನೆ ಏಕೀಭವಿಸಿದ್ದಾರೆ " ಎಂದನು ಮಂತ್ರಿ.

ಆ ಮಾತು ಕೇಳಿ ರಾಜನೂ ರಾಣಿಯೂ ಆಶ್ಚರ್ಯಪಟ್ಟು, "ಏನಂದಿರಿ ? ನಿಮ್ಮ ಅಭಿಪ್ರಾಯದೊಂದಿಗೆ ಸಂಗೀತ ವಿದ್ವಾಂಸರೂ, ಸಾಮಾನ್ಯ ಸಂಗೀತ ಪ್ರಿಯರೂ ಏಕೀಭವಿಸಿದರೇನು ? ಅವರೆಲ್ಲರ ಅಭಿ



ಪ್ರಾಯವನ್ನು ನೀವು ಯಾವಾಗ ಶೇಖರಿಸಿದಿರಿ ?" ಎಂದು ಕೇಳಿದರು.

ಆ ಪ್ರಶ್ನೆಗೆ ಮಂತ್ರಿ "ಆ ಮೂವರೂ ಸಭೆಯಲ್ಲಿ ಹಾಡುತ್ತಿರುವಾಗ ಸಭಿಕರ ಪ್ರವರ್ತನೆ ಹೇಗಿದ್ದಿತೆಂಬುದನ್ನು ತಾವು ಗಮನಿಸಿದಿರಾ ?" ಎಂದು ಕೇಳಿದನು.

"ಮುರಳೀನಾಥನ ಹಾಡಿನಲ್ಲಿ ನನ್ನ ಮನಸ್ಸು ಪೂರ್ತಿ ಸಂಲಗ್ನವಾಗಿ ಹೋಗಿತ್ತು. ಆ ಕಾರಣದಿಂದ ನಾನು ಅದನ್ನೆಲ್ಲಾ ಗಮನಿಸಲಿಲ್ಲ" ಎಂದನು ರಾಜ.

"ನಾನು ವೇಣುನಾಥನ ಹಾಡು ಕೇಳುತ್ತಾ ಅವನ ಸಂಗೀತ ಶಾಸ್ತ್ರ ಪರಿಜ್ಞಾನಕ್ಕೆ ಆಶ್ಚರ್ಯ ಪಡುತ್ತಿದ್ದೆ. ಆದುದರಿಂದ ನಾನೂ ಮಹಾರಾಜರ ಹಾಗೆಯೇ ಸಭಿಕರನ್ನೇನೂ ಗಮನಿಸಲಿಲ್ಲ" ಎಂದಳು ರಾಣಿ.

"ನಮ್ಮಿಂದ ಆರಿಸಲ್ಪಟ್ಟು ಆಸ್ಥಾನ ವಿದ್ವಾಂಸನೆಂದು ನಿಯಮಿಸಲಿರುವ ಗಾಯಕನು ನಾವು ಮೂವರನ್ನಷ್ಟೇ ಅಲ್ಲದೆ ರಾಜ್ಯದೊಳಗಿನ ಪಂಡಿತರನ್ನೂ, ಪಾಮರರನ್ನೂ ಸಹ ತನ್ನ ವಿದ್ಯೆಯಿಂದ ಸಂತೋಷಪಡಿಸುವವನಾಗಬೇಕು. ಮಹಾರಾಜರ ಅಭಿಪ್ರಾಯ ಕೂಡಾ ಇದೇ ಇರಬಹುದೆಂದು ನಂಬುತ್ತೇನೆ" ಎಂದನು ಮಂತ್ರಿ.

"ಅದು ನಿಜವೇ. ನನ್ನ ಅಭಿಪ್ರಾಯವೂ ಅದೇ ನಿಜ" ಎಂದನು ರಾಜ.

"ಹಾಗಾದರೆ ಆ ಮೂವರೂ ಹಾಡುತ್ತಿದ್ದಾಗ ಸಭಿಕರ ಪ್ರವರ್ತನೆ ಹೇಗಿರುವುದೆಂದು ವಿವರಿಸುತ್ತೇನೆ, ಲಾಲಿಸಬೇಕು. ಮುರಳೀನಾಥನು ಹಾಡುತ್ತಾ ಇರುವಾಗ ಪಂಡಿತರು ಒಬ್ಬೊಬ್ಬರೇ ಎದ್ದು ಆಚೆಗೆ ಹೋದರು. ಆದರೆ ಸಾಮಾನ್ಯ ಜನರೆಲ್ಲ ಆನಂದದಿಂದ ತಲೆಯಾಡಿಸುತ್ತ ಕಡೆಯವರೆಗೂ ಕುಳಿತಿದ್ದರು. ಇನ್ನು ವೇಣುನಾಥನು ಹಾಡುತ್ತಿರುವಾಗ ಸಾಮಾನ್ಯ ಜನರು ಗುಂಪು ಗುಂಪಾಗಿ ಎದ್ದು ಹೊರಗೆ ಹೋಗುತ್ತಿದ್ದರು. ಪಂಡಿತರು ಮಾತ್ರ ಕಡೇವರೆಗೂ ಆಸಕ್ತಿಯಿಂದ ಕುಳಿತೇ ಇದ್ದರು. ಸುಸಂಗೀತನು ಹಾಡಲು ಶುರು ಮಾಡಿದ ಮೇಲೆ ಮಾತ್ರ ಪಂಡಿತರೂ ಸರಿ, ಸಾಮಾನ್ಯ ವಿದ್ವಾಂಸರೂ ಸರಿ, ಆಗಾಗ ಹರ್ಷಧ್ವನಿ ಮಾಡುತ್ತ, ಹಾಡು ಮುಗಿಯುವವರೆಗೂ ಆತ್ಯಾಸಕ್ತಿಯಿಂದ ಕುಳಿತೇ ಇದ್ದರು. ಆ ಕಾರಣದಿಂದಲೇ ನಾನು ಆ ಮೂವರಲ್ಲಿ ಆಸ್ಥಾನ ಗಾಯಕ ಪದವಿಗೆ ಅರ್ಹನೆಂದು ಸುಸಂಗೀತನನ್ನು ಆರಿಸಿ ಹೇಳಿದೆನು. ಇನ್ನು ಪ್ರಭುಗಳ ಚಿತ್ತ" ಎಂದನು ಮಂತ್ರಿ.

ರಾಜನೂ ರಾಣಿಯೂ ಮಂತ್ರಿಯ ಅಭಿಪ್ರಾಯವನ್ನೇ ಅನುಮೋದಿಸಿ, ಸುಸಂಗೀತನನ್ನೇ ಆಸ್ಥಾನ ಗಾಯಕ ಪದವಿಗೆ ಆರಿಸಿ, ಗೌರವಿಸಿದರು. ಉಳಿದವರನ್ನೂ ಯಥೋಚಿತವಾಗಿ ಸನ್ಮಾನಿಸಿದರು.






## ೧೭

[ ಚಂದ್ರವರ್ಮನಿಗೆ ಶಿವಪುರವೆಂಬ ಪಟ್ಟಣದಲ್ಲಿ ಅವನ ಪ್ರಿಯ ಬಂಟ ಸುಬಾಹು ಕಾಣಿಸಿದನು. ಅವನ ಮೂಲಕ ತನ್ನ ಸೇನಾನಿಯಾದ ಧೀರಮಲ್ಲನ ಸಂಗತಿಯೂ ತಿಳಿಯಿತು. ಆ ಸಮಯದಲ್ಲಿ ದೂತನೊಬ್ಬನು ತಂದ ಪತ್ರದಿಂದ ಸೇನಾನಿ ಧೀರಮಲ್ಲನು ಸರ್ಪಕೇತುವಿನ ಹಿಡಿತಕ್ಕೆ ಸಿಕ್ಕುವ ಭಯವಿರುವುದೆಂದು ಗೊತ್ತಾಯಿತು. ಅವನ ಸಹಾಯಕ್ಕೆ ಹೋಗುವುದೇ ಒಳ್ಳೆಯದೆಂದು ಸುಬಾಹು ಹೇಳಿದನು. —ಇನ್ನು ಓದಿರಿ ]

ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸುಬಾಹು ಹೇಳಿದಂತೆ ಮಾಡುವುದೇ ಒಳ್ಳೆಯದೆಂದು ಚಂದ್ರವರ್ಮನಿಗೆ ತೋರಿತು. ಅದರಂತೆ ಸುಬಾಹುವಿನ ಅವಸರ ಪ್ರಯತ್ನದಿಂದ ಶಿವಪುರ ನಗರದ ಹೆಚ್ಚಿನ ಸೈನಿಕರೆಲ್ಲಾ ಶಸ್ತ್ರಸನ್ನದ್ಧರಾಗಿ ಬೇಗದಲ್ಲೇ ಒಂದಾಗಿ ಬಂದು ಸೇರಿದರು. ಸೇರಿದ ಸೈನಿಕರೆಲ್ಲಾ ವೀರಾರಾವದಿಂದ ಬೇಗಬೇಗನೇ ಚಂದ್ರವರ್ಮನ ಮುಂದಾಳ್ತನದಲ್ಲಿ ಹೊರಟಿತು.

ಸ್ವಲ್ಪ ಹೊತ್ತಿನೊಳಗೆ ಸೈನ್ಯವೆಲ್ಲವೂ ನಗರ ಪ್ರಾಕಾರಗಳನ್ನೂ ಮುಖ್ಯ ಕೋಟೆಯನ್ನೂ ದಾಟಿ ಉತ್ತರ ದಿಕ್ಕಿನ ಕಡೆಗೆ ಸಾಗತೊಡಗಿತು. ಎಲ್ಲಾ ಸೈನ್ಯವನ್ನೂ ಎರಡು ಭಾಗಗಳಾಗಿ ಮಾಡಿಕೊಂಡು ಒಂದು ಭಾಗದ ಅಶ್ವಿಕ ದಳದ ಮುಂದೆ ಸುಬಾಹು ಹೋಗುತ್ತಿದ್ದನು. ಮತ್ತೊಂದು ಭಾಗದ ಅಶ್ವಿಕ ದಳದ ಹಿಂದೆ ಚಂದ್ರವರ್ಮನು ಸಾಗುತ್ತಿದ್ದನು. ರಾತ್ರಿ ಪೂರಾ ಸೈನ್ಯವು ಎಲ್ಲಿಯೂ ತಂಗದೆ ಒಂದೇ ರೀತಿಯಲ್ಲಿ ಸಾಗುತ್ತಲೇ ಇದ್ದಿತು, ಸೂರ್ಯೋದಯವಾಗಲು ಒಂದೆರಡು ಘಳಿಗೆಗಳಿರುವ ಹೊತ್ತಿಗೆ ಒಂದು ಗುಡ್ಡದ ಬಳಸಿನ ಕಡೆಯಿಂದ ಓಡುತ್ತಾ ಬರುವ ಕುದುರೆಗಳ ಖುರಪುಟಧ್ವನಿ ಕೇಳಿ ಬರ



ತೊಡಗಿತು. ಮುಂದಾಳುಗಳು ತಟ್ಟನೆ ನಿಂತು, ಎಲ್ಲಾ ಸೈನಿಕರನ್ನೂ ನಿಲ್ಲಿಸಿದರು.

ಹಾಗೆ ಬರುವವರು ಮಿತ್ರರೋ ಶತ್ರುಗಳೋ ತಿಳಿಯಲಿಲ್ಲ, ಅದನ್ನು ತಿಳಿದುಕೊಳ್ಳಲಿಕ್ಕಾಗಿ, ಸುಬಾಹುವೂ ಚಂದ್ರವರ್ಮನೂ ಹತ್ತುಮಂದಿ ರಾಹುತರೊಂದಿಗೆ ಸೈನ್ಯ ಸಮೂಹದಿಂದ ಬೇರ್ಪಟ್ಟು, ಬಹು ವೇಗವಾಗಿ ಮುಂದಕ್ಕೆ ಓಡಿದರು. ಆ ಬಳಸಿನ ಹತ್ತಿರ ನಾಲ್ವರು ಅಶ್ವಿಕರು ಅವರಿಗೆ ಇದಿರಾದರು. ಮಸಕು ಕತ್ತಲೆಯಲ್ಲಿ ಅವರು ಸುಬಾಹುವಿನ ಗುರುತು ಹಿಡಿದು, ತಮ್ಮ ಕುದುರೆಗಳನ್ನು ನಿಲ್ಲಿಸಿ, "ಓ! ಸೇನಾನಿ ಸುಬಾಹುಗಳೇ! ಇಲ್ಲಿಯೇ ಸಿಕ್ಕಿದಿರಿ! ಬಹಳ ಒಳ್ಳೆಯದಾಯಿತು! ರಾಜಪ್ರತಿನಿಧಿ ವೀರ ಮಲ್ಲರು ನಮ್ಮನ್ನು ಕಳುಹಿಸಿದ್ದಾರೆ. ಸರ್ಪಕೇತು ಎಂಬ ರಾಜನ ಸೈನಿಕರು, ನಮ್ಮ ನಗರದ ಕಡೆಗೆ ಹಿಂದಿರುಗಿ ಓಡುತ್ತಿರುವ ನಮ್ಮ ಸೈನಿಕರನ್ನು ಅಡ್ಡ ದಾರಿಯಿಂದ ಬಂದು ಅಟಕಾಯಿಸಿದರು. ಭಾರಿ ಹೋರಾಟವಾಯಿತು. ಆ ಹೋರಾಟದಲ್ಲಿ ನಮ್ಮ ವರನೇಕರು ವೀರ ಸ್ವರ್ಗ ಪಡೆದರು. ರಾಜ ಪ್ರತಿನಿಧಿಯವರು ತಮ್ಮ ಅಶ್ವಿಕರೊಂದಿಗೆ ಸರ್ಪಕೇತುವಿನ ಬಲವು ನಗರದ ಕಡೆಗೆ ಹೋಗದಂತೆ ಅಡ್ಡಗಟ್ಟಿ ಹೋರಾಡುತ್ತಾ ತಿರುಗುತ್ತಿದ್ದಾರೆ. ಅದೊಂದು ಜೀವನ್ಮರಣ ಹೋರಾಟ! ಇದನ್ನು ನಿಮಗೆ ಹೇಳಲು ನಮ್ಮನ್ನು ಕಳುಹಿಸಿದರು." ಎಂದನು.

ಸೈನಿಕರು ಹಾಗೆ ಹೇಳುತ್ತಿರುವಾಗಲೇ ಮತ್ತೆ ಕೆಲವು ರಾಹುತರು ಅವರ ಕಡೆಗೇ ಬರುವುದು ಕಂಡಿತು. ನೋಡ ನೋಡುತ್ತಿರಲು ಧೀರಮಲ್ಲನು ಮಹಾ ವೇಗದಿಂದ ಹತ್ತಿರ ಬಂದು, "ಬಂದೆಯಾ ಸುಬಾಹು? ನಾವೀಗ ನಗರ ರಕ್ಷಣೆಗೆ ಹೋಗಲೇ ಬೇಕು. ಸರ್ಪಕೇತುವಿನೊಂದಿಗೆ..." ಎಂದು ತಟ್ಟನೆ ಚಂದ್ರವರ್ಮನನ್ನು ನೋಡಿ ಉಸಿರು ಕಟ್ಟಿದವನಂತೆ ಮಾತು ನಿಲ್ಲಿಸಿ, ಆನಂದಾಶ್ಚರ್ಯಗಳಿಂದ ಕುಣಿಯುವಂತೆ ಕುದುರೆಯಿಂದ ಕೆಳಗೆ ಹಾರಿ "ಮಹಾರಾಜಾ! ನೀವು!...ನೀವು! ಇಲ್ಲಿ!..." ಎಂದು ಹರ್ಷಧ್ವನಿ ಮಾಡುತ್ತಾ ಓಡಿಬಂದು ಚಂದ್ರವರ್ಮನ ಕೈಗಳನ್ನು ಹಿಡಿದು, "ನಾನೇನೂ ಕನಸು ಕಾಣುವುದಲ್ಲವಷ್ಟೆ?" ಎಂದನು.

"ಧೀರಮಲ್ಲಾ! ಮತ್ತೆ ಈ ಜನ್ಮದಲ್ಲಿ ನಿನ್ನನ್ನು ನೋಡುವೆನೆಂದು ಅಂದುಕೊಳ್ಳಲೇ ಇಲ್ಲ! ನಾನು ಕೂಡಾ ಅಂದುಕೊಂಡೆನು. ಇದು ಕನಸಲ್ಲ, ನಿಜವೇ. ಈಗ ಎಂತಹ ವಿಚಿತ್ರ ಪರಿಸ್ಥಿತಿಯಲ್ಲಿ ಕಲಿತುಕೊಂಡಿದ್ದೇವೆ! ಹೆಚ್ಚು ಮಾತಿಗೆ ಕೂಡಾ ಇದು ಸಮಯವಲ್ಲ! ಸುಬಾಹುವಿಂದ ಎಲ್ಲಾ ಸಂಗತಿ ಗೊತ್ತಾಗಿದೆ! ಮತ್ತೆಲ್ಲಾ ನಿಧಾನವಾಗಿ ಮಾತಾಡೋಣ. ನಡೆ ನಡೆ! ಶಿವಪುರ ರಕ್ಷಣೆಯೇ ಈಗ ನಮ್ಮ ಮುಖ್ಯ ಗುರಿ" ಎಂದನು ಚಂದ್ರವರ್ಮ.

ಸೇನಾನಿ ಧೀರಮಲ್ಲನು, ಒಂದುಸಾರಿ ಮುಂದಿರುವ ದೊಡ್ಡ ಸೇನೆಗಳ ಕಡೆಗೂ, ಹಿಂದಿನಿಂದ ಓಡಿಬಂದ

ಸೇನೆಗಳ ಕಡೆಗೂ ನೋಡಿ, "ಮಹಾರಾಜರೇ, ನಿಮ್ಮ ಬರುವಿಕೆಯಿಂದ ಪರಿಸ್ಥಿತಿ ಬದಲಾಗಿಬಿಟ್ಟಿತು. ಮಹಾ ಘಾತಕ ಸರ್ಪಕೇತುವಿನೊಂದಿಗೆ ಕೊನೆಯ ಹೋರಾಟದ ದಿವ್ಯ ಸಮಯ ಇದೀಗಲೇ ಬಂದುಬಿಟ್ಟಿತು. ಅದು ನಗರದಲ್ಲಾದರೂ, ನಗರದ ಹೊರಗೆಲ್ಲಿಯೋ ಆದರೂ ಒಂದೇ. ಈಗ ಈ ದಾರಿಯಲ್ಲಿ ಮುಂದಕ್ಕೆ ತೂರಿಕೊಂಡು ಬರುವುದು ಅವನ ಅಶ್ವಿಕ ಸೈನ್ಯವೇ. ಅವನ ಕಾಲ್ಬಲವೆಲ್ಲಾ ಗುಡ್ಡದಾಚೆಗಿನ ದೊಡ್ಡ ಮೈದಾನದಲ್ಲಿದೆ. ನಾವು ಈ ಗುಡ್ಡಗಳ ನಡುವೆ ವ್ಯೂಹ ರಚಿಸಲು ಸ್ವಲ್ಪ ಮಾತ್ರ ವ್ಯವಧಿ ಇದ್ದರೆ ಸಾಕು" ಎಂದು ಹೇಳಿ ಸುಬಾಹುವಿನ ಕಡೆಗೆ ತಿರುಗಿ, "ಸುಬಾಹೂ, ಸೈನ್ಯವನ್ನೆಲ್ಲಾ ಆ ಪಕ್ಕಕ್ಕೆ ತಿರುಗಿಸಿ, ಅಲ್ಲಿರುವ ಬೆಟ್ಟದ ಕಣಿವೆಗೆ ಸಾಗಿಸಿಕೊಂಡು ಹೋಗು. ಕಣಿವೆಯ ಮುಖವನ್ನು ರಕ್ಷಿಸಲು ಕೆಲವು ಸೈನಿಕರಿದ್ದರೇ ಸಾಕು. ಅಲ್ಲಿ ಕೆಲವು ಮಂದಿ ಅಶ್ವಿಕರನ್ನು ನಿಲ್ಲಿಸು, ಮತ್ತೆ ಕೆಲವು ಗುರಿಕಾರರಾದ ಬಿಲ್ಲುಗಾರರನ್ನು ಕಾವಲಿಗಿರಿಸಿ ಬಿಡು. ಕೆಲವರು ಬಂಡೆಗಳನ್ನು ಉರುಳಿಸುವವರಾಗಿರಲಿ! ಬೇಗ! ಬೇಗ!" ಎಂದು ಹೇಳಿ ಚಂದ್ರವರ್ಮನೊಂದಿಗೆ ಕಣಿವೆಯ ಕಡೆಗೆ ಹೊರಟನು.



ಸ್ವಲ್ಪ ಹೊತ್ತಿಗೆ ಎಲ್ಲಾ ಸೈನ್ಯವೂ ಕಣಿವೆಯೊಳಗೆ ಪ್ರವೇಶಮಾಡಿತು. ಚಂದ್ರವರ್ಮನು ಧೀರಮಲ್ಲನೊಂದಿಗೆ ತನ್ನ ವೀರಪುರವನ್ನು ಬಿಟ್ಟು ಹೋದ ಮೇಲೆ ತಾನು ಇದಿರಿಸಿದ ಕಷ್ಟಸುಖಗಳನ್ನು ಕುರಿತು ಸಂಕ್ಷೇಪವಾಗಿ ಸಮಯ ಸಿಕ್ಕಿದಂತೆ ಹೇಳಿದನು. ಅದನ್ನೆಲ್ಲಾ ಮನಸ್ಸು ಕೊಟ್ಟು ಕೇಳಿದ ಧೀರಮಲ್ಲನು, ಬಹಳ ವಿನಯದಿಂದ, "ಮಹಾರಾಜಾ, ನಾನೂ ಸುಬಾಹುವೂ ಪಟ್ಟ ಕಷ್ಟಗಳನ್ನೂ, ಕಡೆಗೆ ಈ ಶಿವ ಸಿಂಹ ರಾಜನ ಆಸ್ಥಾನದಲ್ಲಿ, ಅವನ ಪ್ರತಿನಿಧಿಯಾಗಿ ಶಿವಪುರದಲ್ಲಿರುವ ಸಂಗತಿಯನ್ನೆಲ್ಲಾ ಸುಬಾಹು ನಿಮಗೆ ಹೇಳಿದ್ದಾನಷ್ಟೆ? ಈಗ ನಮಗೆ ಒಂದಿಷ್ಟೂ ಇದಿರು ನೋಡದ ಹಾಗೆ ಈ ಸರ್ಪಕೇತುವಿನೊಂದಿಗೆ ಸೆಣಸಾಟ ಬಿದ್ದಿದೆ. ಆ ದುಷ್ಟನೊಂದಿಗೆ ಎಂದೋ ಒಂದು ದಿನ ನಾವು ಯುದ್ಧ ಮಾಡದೆ ತಪ್ಪದು. ಆ ಸಂದರ್ಭ ಈಗಲೇ ಬಂದುಬಿಟ್ಟಿದೆ. ಇದು ಮರಣವೋ ವೀರ ಸ್ವರ್ಗವೋ ದೇವರಿಗೇ ಗೊತ್ತು. ನಮಗಂತೂ ಬೇರೆ ಮಾರ್ಗ ಈಗ ಇಲ್ಲ! ಈ ಸಮಯದಲ್ಲಿ ನಾವು ಒಂದಾದುದೊಂದು ಮಹಾ ಪುಣ್ಯ. ಆದ್ದರಿಂದ ನಮ್ಮ ಭವಿಷ್ಯ ಒಳ್ಳೆಯದಾಗುವುದೆಂದೇ ನಂಬೋಣ" ಎಂದನು.

"ನಿಜ, ಧೀರಮಲ್ಲಾ! ನಿಜ! ನಾವು ಸ್ವದೇಶವನ್ನು ಬಿಟ್ಟು ಹೀಗೆಲ್ಲಾ ದೇಶ ದೇಶ ತಿರುಗುವುದರಲ್ಲಿ ಅರ್ಥವೇನಿಲ್ಲ. ಸೈನ್ಯವನ್ನು ಸಮಾಯತ್ತಗೊಳಿಸು. ಉತ್ಸಾಹದ ಮಾತುಗಳಿಂದ ಉತ್ತೇಜಿಸಿ ಹುರಿದುಂಬಿಸು. ಈ ಸರ್ಪಕೇತುವಿನೊಂದಿಗೆ ನಾವು ಬದುಕಿನ ಪರೀಕ್ಷೆ ಇಂದೇ ಆಗಿಹೋಗಲಿ!" ಎಂದನು ಚಂದ್ರವರ್ಮ.

ಹೀಗೆ ಇವರು ಮಾತಾಡಿಕೊಂಡಿರುವಾಗಲೇ ಕಣಿವೆಯ ಮುಖದಲ್ಲಿ ಕಲಕಲರವವೆದ್ದುದು ಕೇಳಿಸಿತು. ಅಲ್ಲಿ ಕಾವಲಿಗಿದ್ದ ಬಿಲ್ಲುಗಾರರು ಬಾಣಗಳ ಗುರಿ ಹಿಡಿದು ಮುಖದ್ವಾರದಾಚೆಗೆ ರಿವ್ವರಿವ್ವನೆ ಬಾಣ ಬಿಡುತ್ತಿದ್ದರು. ಕೆಲವರು ಅಶ್ವಿಕರು ಕುದುರೆಗಳನ್ನು ಮುಂದಕ್ಕೆ ಹಾರಿಸಿ ನುಗ್ಗಿ, ತಮ್ಮ ಕೈಯಲ್ಲಿದ್ದ ಈಟಿಗಳಿಂದ ಕಣಿವೆಯೊಳಗೆ ನುಗ್ಗಲು ನೋಡುವ ಶತ್ರು ಅಶ್ವಿಕರನ್ನು ತಿವಿದು ಬೀಳಿಸುತ್ತಿದ್ದರು. ಅವರ ಕಿರಿಚು, ಕೂಗು, ಹಾಹಾಕಾರಗಳಿಂದ ಆ ಪ್ರದೇಶವು ಭಯಂಕರವಾಯಿತು. ಮೃಗಪಕ್ಷಿಗಳು ಹೆದರಿ ಹಾರಿ ಹಾರಿ ಓಡುತ್ತಿದ್ದುವು.

"ಮಹಾರಾಜಾ, ಸರ್ಪಕೇತು ಕಣಿವೆಗೆ ಪ್ರವೇಶಿಸಲು ಪ್ರಯತ್ನಿಸುತ್ತಿದ್ದಾನೆ. ಸಾವಿರಾರು ಸಂಖ್ಯೆಯಲ್ಲಿರುವ ಅವನ ಅಶ್ವಿಕರೂ, ಪದಾತಿಗಳೂ ಆವೇಶದ ಗರ್ಜನೆ ಮಾಡಿಕೊಂಡು ಹೇಗಾದರೂ ಕಣಿವೆಯೊಳಗೆ ನುಗ್ಗಿ ನಮ್ಮನ್ನು ಸದೆಬಡಿಯುವ ನಿರ್ಧಾರದಲ್ಲಿದ್ದಾರೆ. ನಾವೀಗ ಆ ಇಕ್ಕಟ್ಟಿನ ಮಾರ್ಗದಲ್ಲಿ ಎರಡು ಬದಿಗಳಿಂದಲೂ ಅವರನ್ನು ಇದಿರಿಸಿ ನಾಶಪಡಿಸುವುದೇ ತಕ್ಕ ಮಾರ್ಗ! ಈ ದಿನ ನನ್ನ ಹಸಿದ ಕತ್ತಿಗೆ ಸರಿಯಾದ ಬಲಿ!" ಎಂದವನೇ ಜಯ ಜಯಾಕಾರದ ಗರ್ಜನೆಯೊಂದಿಗೆ ಧೀರ ಮಲ್ಲನು ಚಂಗನೆ ಹಾರಿ ಕುದುರೆಯ ಮೇಲೇರಿದನು.

ಚಂದ್ರವರ್ಮನೂ ಜಯ ಜಯಾಕಾರದ ಪ್ರತಿಧ್ವನಿಯೊಂದಿಗೆ ಒಂದೇ ಹಾರಿಕೆಗೆ ತನ್ನ ಅಶ್ವದ ಮೇಲೆ ಅಧಿರೋಹಿಸಿದನು.

ಚಂದ್ರವರ್ಮ ಧೀರಮಲ್ಲರಿಬ್ಬರೂ ಕ್ಷಣ ಮಾತ್ರದಲ್ಲಿ ತಮ್ಮ ಸೈನ್ಯವನ್ನು ಎರಡಾಗಿ ಭಾಗಿಸಿ ಕಣಿವೆಯ ಎರಡು ಬದಿಗಳಲ್ಲಿಯೂ ನಿಲ್ಲಿಸಿದರು. ಸುಬಾಹು ಕೂಡಾ ಕೆಲವು ಮಂದಿ ಅಶ್ವಿಕರು ಮತ್ತು ಪದಾತಿಗಳನ್ನು ತನ್ನೊಂದಿಗೆ ಕರೆದುಕೊಂಡು ದ್ವಾರದ ಕಡೆಗೆ ಧಾವಿಸಿದನು.

ಕ್ರಮವಾಗಿ ಸರ್ಪಕೇತುವಿನ ಸೈನಿಕರು ಇಕ್ಕಟ್ಟಾದ ದ್ವಾರದಿಂದ ಒಳಗೆ ಪ್ರವೇಶಿಸಲು ಕಟ್ಟೊತ್ತಡದ ಪ್ರಯತ್ನಕ್ಕೇ ತೊಡಗಿದರು. ಸಾವಿರಾರು ಸಂಖ್ಯೆ



ಯಲ್ಲಿದ್ದ ಅವನ ಅಶ್ವಿಕರೂ, ಪದಾತಿಗಳೂ ಪ್ರಳಯ ಭಯಂಕರವಾಗಿ ಗರ್ಜಿಸುತ್ತ ಕಣಿವೆಯೊಳಗೆ ತೂರಿಕೊಂಡು ನುಗ್ಗಲು ಪ್ರಯತ್ನಿಸುತ್ತಿದ್ದರು. ಅವರಲ್ಲನೇಕರು ದ್ವಾರದ ಹತ್ತಿರವೇ ಸುಬಾಹುವಿನ ವೀರರ ಈಟಿಗಳಿಗೂ, ಕತ್ತಿಗಳಿಗೂ, ಅಂಬುಗಳಿಗೂ ಆಹುತಿಯಾಗಿ ಬಿದ್ದರು. ಅವರನ್ನೂ ಮೀರಿ ಬಿದ್ದವರನ್ನು ಮೆಟ್ಟಿಕೊಂಡು ಮುನ್ನುಗ್ಗಿ ಬಂದವರನ್ನು ಚಂದ್ರವರ್ಮನೂ, ಧೀರಮಲ್ಲನೂ ಕೊನೆಗಾಣಿಸುತ್ತಿದ್ದರು.

ಹೀಗೆ ಹೋರಾಟವು ಸ್ವಲ್ಪ ಹೊತ್ತಿನವರೆಗೆ ಸಾಗಿತು. ಶತ್ರು ಸೈನಿಕರೂ, ಚಂದ್ರವರ್ಮನ ಕಡೆಯವರೂ ಸತ್ತು, ಸತ್ತು ಬಿದ್ದರು. ಶತ್ರು ಸೈನಿಕರ ಸಾವಿಗೆ ಲೆಕ್ಕವೇ ಇರಲಿಲ್ಲ. ಆದರೆ ಹೊರಗೆ ಉಳಿದಿರುವ ಶತ್ರು ಸೈನಿಕರು ಅಪಾರವೆಂದು ಗೊತ್ತಿದ್ದಿತು. ಇಷ್ಟರವರೆಗೆ ತಮ್ಮ ಸೈನಿಕರು ಸ್ವಲ್ಪ ಮಂದಿ ಮಾತ್ರವೇ ಸತ್ತರೂ, ಸರ್ಪಕೇತು ಇನ್ನಿಷ್ಟು ಸೈನಿಕರನ್ನು ಆ ಪ್ರದೇಶಕ್ಕೆ ಬರಮಾಡಿಕೊಂಡರೆ ತಮ್ಮ ಸೈನಿಕರ ಸಂಖ್ಯೆ ಎಷ್ಟು ತಗ್ಗುವುದೋ ? ಆದುದರಿಂದ ತಾವು ಸಿಕ್ಕಿನಲ್ಲಿ ಬೀಳುತ್ತೇವೆಂದು ಧೀರಮಲ್ಲನೂ ಚಂದ್ರವರ್ಮನೂ ಅಂದುಕೊಳ್ಳುತ್ತ ಚಿಂತೆಗೆ ಬಿದ್ದರು.

ಬೇರೆ ಉಪಾಯವೇನೆಂದು ಅವರಿಬ್ಬರೂ ಆಲೋಚಿಸುತ್ತಿರುವಾಗ, ಸರ್ಪಕೇತುವಿನ ಕಂಚಿನಂತಹ ಕಂಠಸ್ವರವು ಕಣಿವೆಯ ದ್ವಾರದ ಹತ್ತಿರ ಮಾರ್ಮೊಳಗಿತು. "ಬಿಡಲೇ ಬೇಡಿರಿ ! ಆ ಚಂದ್ರವರ್ಮ ಮತ್ತು ಧೀರಮಲ್ಲನ ತಲೆಗಳನ್ನು ತರುವವರಿಗೆ ಲಕ್ಷ ವರಹಾ ಕೊಡುತ್ತೇನೆ. ಈ ಪರಗಣೆಗೆ ಅವರನ್ನೇ ಸಾಮಂತರಾಜನಾಗಿ ಮಾಡುತ್ತೇನೆ. ಮುಂದೆ ನುಗ್ಗಿರಿ ! ಇದು ನಾನು ಪ್ರಮಾಣ ಮಾಡಿ ಹೇಳುವ ಮಾತು ! ಈ ಯುದ್ಧದಲ್ಲಿ ಸತ್ತವರ ಮೂರು ತಲೆಮಾರಿನವರೆಗೆ ಸುಖವಾಗಿರುವಂತೆ ಮಾಡುತ್ತೇನೆ. ಹೆದರಿ ಹಿಂಜರಿದವರನ್ನು ಕೊಲ್ಲದೆ ಬಿಡಲಾರೆ ! ಜಾಗ್ರತೇ !"...ಎಂದು ಸರ್ಪಕೇತು ತನ್ನ ಸೈನಿಕರಿಗೆ ಕೂಗಿ ಕೂಗಿ ಹೇಳುತ್ತಲೇ ಇದ್ದನು.






ಕಣ್ಣು ಮುಚ್ಚಿ ಬಿಡಿಸುವುದರೊಳಗೆ ಕಣಿವೆಯ ದ್ವಾರವು ಭಯಂಕರ ಯುದ್ಧ ರಂಗವಾಗಿ ಹೋಯಿತು. ಸರ್ಪಕೇತು ಕೊಡುವೆನೆಂದ ಬಹುಮಾನಗಳ ಆಶೆಯಿಂದ, ಹಿಂಜರಿದು ಬದುಕಿದರೂ ಉಳಿಯಲಾರೆವೆಂಬ ನಿರಾಶೆಯಿಂದ ಅವನ ಸೈನಿಕರು ಎಲ್ಲಕ್ಕೂ ಸಿದ್ಧರಾಗಿ ಸಣ್ಣಗಿನ ಕಣಿವೆಯ ಬಾಯಿಯೊಳಗೆ ಯಮಪುರಿಗೆ ನಗ್ಗುವಂತೆ ನುಗ್ಗುತ್ತಿದ್ದರು. ನುಗ್ಗಿ ಸತ್ತು, ಬೀಳುವುದರಲ್ಲಿ ಅವರೊಳಗೆ ಸ್ಪರ್ಧೆಯೇ ನಡೆಯಿತು. ಆಯುಧಗಳಿಂದಲೂ, ಉರುಳುವ ಕಲ್ಲುಗಳಿಂದಲೂ ಶತ್ರುಗಳು ಬಡಬಡನೆ ಸತ್ತು ಬೀಳುತ್ತಿದ್ದರು. ಸುಬಾಹುವಿನ ಹತ್ತಿರವಿದ್ದ ಸ್ವಲ್ಪವೇ ಸೈನ್ಯಕ್ಕೆ ಜತೆಯಾಗಿ ಧೀರಮಲ್ಲನು ಮತ್ತಿಷ್ಟು ಸೈನಿಕರನ್ನು ಕಳುಹಿಸಿದನು. ಆದರೆ ಸರ್ಪಕೇತುವಿನ ಸೈನಿಕರು ಸತ್ತ ಹಾಗು ಸಾಯಲಿರುವ ತಮ್ಮ ಜತೆಗಾರರ ಮೇಲೆಯೇ ಕುದುರೆಗಳನ್ನು ಹಾರಿಸಿಕೊಂಡು ಕ್ರಮಕ್ರಮವಾಗಿ ಮುಂದೆ ನುಗ್ಗುತ್ತಿದ್ದರು.

ಇದ್ದಕ್ಕಿದ್ದ ಹಾಗೆ ಚಂದ್ರವರ್ಮನು ತನ್ನ ಕುದುರೆಯನ್ನು ಧೀರಮಲ್ಲನ ಕುದುರೆಯ ಕಡೆಗೆ ಹಾರಿಸಿ, "ಧೀರಮಲ್ಲಾ ! ನನಗೆ ಒಂದು ಉಪಾಯ ಕಾಣುತ್ತದೆ. ನಾವು ಸ್ವಲ್ಪ ಸೈನ್ಯದೊಂದಿಗೆ, ಅಗೋ, ಅಲ್ಲಿ ಕಾಣುವ ಕಲ್ಲುಗಳ ರಾಶಿಯಿಂದಾಗಿ ಆಚೆಗೆ ಹೋಗಿ ಹಿಂಬದಿಯಿಂದ ಸರ್ಪಕೇತುವಿನ ಸೈನ್ಯದ ಮೇಲೆ ಬಿದ್ದು ಇನ್ನಿಷ್ಟು ಗಾಬರಿಪಡಿಸೋಣ. ಒಂದುವೇಳೆ ಆಚೆಯ ಬದಿಗೆ ಇಳಿಯಲು ಸಾಧ್ಯವಾಗದೆ ಹೋದರೆ ಆ ಕಲ್ಲು ರಾಶಿಗಳ ಮರೆಯಲ್ಲಿದ್ದು ನಮ್ಮ ಬಿಲ್ಲುಗಾರರರೂ, ಬಂಡೆಗಳನ್ನು ಉರುಳಿಸುವವರೂ ಶತ್ರುಗಳ ಮೇಲೆ ನಾಶಕಾರೀ ಪ್ರಯೋಗ ಮಾಡಬಹುದು. ಆಗ ಸರ್ಪಕೇತುವಿಗೆ ಸ್ವಲ್ಪ ಸೈನ್ಯವನ್ನಾದರೂ ಕಣಿವೆಯ ಮುಖದ್ವಾರದಿಂದ ಆಕಡೆಗೆ ಕಳುಹಿಸಬೇಕಾಗಿ ಬರುತ್ತದೆ. ಏನನ್ನುವಿ ?" ಎಂದನು.

"ಹೌದು, ಮಹಾರಾಜರೇ, ನಾವೀಗ ಏನೋ ಒಂದು ಮಾಡದೆ ಗತ್ಯಂತರವಿಲ್ಲ. ಶತ್ರುಸೈನ್ಯವೆಲ್ಲವೂ ಒಂದೇಸಾರಿ ಕಣಿವೆಯೊಳಗೆ ಪ್ರವೇಶಿಸಿಬಿಟ್ಟರೆ ಮತ್ತೆ ನಮಗೆ ಓಡಿಹೋಗಲಿಕ್ಕೂ ದಾರಿಯಿಲ್ಲದೆ ಇಕ್ಕುಳದಲ್ಲಿ ಸಿಕ್ಕಿಕೊಂಡಂತಾಗಿ ಜಜ್ಜಿಹೋಗಬಹುದು.

ಚಂದ್ರವರ್ಮನು ಕೆಲವು ಮಂದಿ ಕಟ್ಟಾಳುಗಳನ್ನೂ ಬಿಲ್ಲು ವೀರರನ್ನೂ ಕರೆದುಕೊಂಡು ದೊಡ್ಡ ದೊಡ್ಡ ಬಂಡೆಗಳ ಮೇಲಿಂದಾಗಿ ಹೋಗುತ್ತ, ಮೇಲೆ ಹತ್ತಿ, ಕಣಿವೆಯ ಮುಂದಿರುವ ಮೈದಾನ ಪ್ರದೇಶದ ಕಡೆಗೆ ನೋಡಿದನು. ಅಲ್ಲಿ ಅವನ ಮುಂದಿರುವ ದೃಶ್ಯವು ಎಂತಹ ಧೈರ್ಯಶಾಲಿಯನ್ನಾದರೂ ಭೀರುವಾಗಿ ಹೋಗುವಂತೆ ಮಾಡುವಂತಹ ಸೈನ್ಯ ಸಾಗರವೇ ಇದ್ದಿತು.

ಸಾವಿರಾರು ಸಂಖ್ಯೆಯ ಸರ್ಪಕೇತುವಿನ ಅಶ್ವಿಕರೂ ಪದಾತಿಗಳೂ ಕಣಿವೆಯ ಮುಖದ್ವಾರದ



ಕಡೆಗೆ ವೇಗವಾಗಿ ಕದಲುತ್ತಿದ್ದರು. ಇಷ್ಟು ದೊಡ್ಡ ಸೈನ್ಯವನ್ನು ಯುದ್ಧಮಾಡಿ ಓಡಿಸುವುದು ಹೇಗೆ ಸಾಧ್ಯವಾದೀತು ? ಹೆಚ್ಚಾದರೆ ತಾನೂ, ಧೀರಮಲ್ಲ, ಸುಬಾಹು ಮತ್ತು ದೇವಲ ಕೂಡಾ ಅಲ್ಲಿಂದ ತಪ್ಪಿಸಿಕೊಂಡು ಹೋಗುವುದೇ ದೊಡ್ಡ ಸಾಹಸ ವಾಗಬಹುದು. ಆಮೇಲೆ ತನಗೆ ಮತ್ತೆ ಕಾಡು ಕಾಡು ತಿರುಗುವ ದುರವಸ್ಥೆಯೇ ಪ್ರಾರಂಭವಾಗು ತ್ತದೆ. ತನ್ನ ವಿಧಿ ಈ ರೀತಿಯಾಗಬೇಕೇ ? ಹೀಗೆ ತೋರಿತು ಚಂದ್ರವರ್ಮನಿಗೆ.

ಅವನು ನಿಸ್ಸ್ಪೃಹೆಯ ಭಾವನೆಯಿಂದ ಶತ್ರು ಸೈನ್ಯವನ್ನು ನೋಡಿಕೊಂಡಿರುವಾಗ, ಅವನಿಗೆ ಮಿಂಚಿನ ರೀತಿಯಲ್ಲಿ ಒಂದು ಹೊಸ ಬಗೆಯ ಆಲೋಚನೆ ಬಂತು. ಅವನು ಅತ್ಯಂತ ಧೈರ್ಯ ದಿಂದ ಶತ್ರುಗಳ ಕಣ್ಣಿಗೆ ತಾನು ಕಾಣುವ ಹಾಗೆ ಎತ್ತರವಾದೊಂದು ಬಂಡೆಯ ಮೇಲೆ ಹತ್ತಿ ನಿಂತು, ಖಂಗನೆ ಮೊಳಗುವ ಉಚ್ಚ ಕಂಠಸ್ವರದಿಂದ ಹೀಗೆ ಬೊಬ್ಬಿರಿದು ಹೇಳಿದನು.

" ಓ ಸೈನಿಕರೇ ! ನಾನು ವೀರಪುರದ ಸಾಮಂತ ನಾದ ಸೂರ್ಯವರ್ಮರ ಕುಮಾರ ಚಂದ್ರವರ್ಮನು! ಅಧಮಾಧಮನಾದ ಸರ್ಪಕೇತು ಮಾಹಿಷ್ಮತೀ ರಾಜವಂಶವನ್ನು ಮಹಾ ಕ್ರೂರತನದಿಂದ ನಿರ್ಮೂಲಿಸಿ ಹೇಗೆ ಚಕ್ರವರ್ತಿಯಾದನೆಂದು ನಿಮಗೆಲ್ಲರಿಗೂ ಗೊತ್ತಿದೆ. ಹೇಗೆ ನನ್ನ ತಂದೆ ಯನ್ನು ಹತಮಾಡಿದನೆಂತಲೂ ಬಲ್ಲಿರಿ ! ನಾನು ಮತ್ತೆ ಮಾಹಿಷ್ಮತೀ ಸಿಂಹಾಸನದ ಮೇಲೆ ಯಶೋ ವರ್ಧನ ಚಕ್ರವರ್ತಿಯವರ ಪುತ್ರನಾದ ತಪೋ ವರ್ಧನನನ್ನು ಕೂಡಿಸಬೇಕೆಂತಲೇ ಇದ್ದೇನೆ. ಅದಕ್ಕಾ ಗಿಯೇ ನನ್ನ ಜೀವವನ್ನು ಉಳಿಸಿಕೊಂಡಿದ್ದೇನೆ. ಒಂದುವೇಳೆ ಅವನು ಅದಕ್ಕೆ ಒಪ್ಪದೇ ಹೋದ ಪಕ್ಷದಲ್ಲಿ ನಿಮಗೆಲ್ಲಾ ಇಷ್ಟವಿರುವ ಬೇರೆ ಯಾರ ನ್ನಾದರೂ ಸಿಂಹಾಸನದಲ್ಲಿ ಕೂಡಿಸುತ್ತೇನೆ. ಮಹಾ ದುಷ್ಟನೂ, ಕಪಟಿಯೂ, ಕ್ರೂರಿಯೂ ಆದ ಈ ಸರ್ಪಕೇತುವನ್ನು ಮೊದಲು ಹಿಡಿದು ಬಂಧಿಸಬೇಕು. ನನ್ನ ವೀರಪುರದ ಸಂಸ್ಥಾನದವರು ಯಾರಾದರೂ ನಿಮ್ಮಲ್ಲಿದ್ದರೆ ಅವರೇ ಈ ಕೆಲಸ ಮಾಡಬಹುದು. ದ್ರೋಹಿಗಳಲ್ಲದ ವೀರರೇ ! ಗಮನಿಸಿರಿ ! ಒಂದಾಗಿ ಸೇರಿರಿ ! ".

ಹೀಗೆ ಚಂದ್ರವರ್ಮನು ಸ್ಪಷ್ಟವಾಗಿ ಕೂಗಿ ಹೇಳಿದುದನ್ನು ಕೇಳಿ ಸೈನಿಕರೆಲ್ಲಾ ಒಂದು ನಿಮಿಷ ಸ್ಥಾಣುವಿನಂತೆ ನಿಂತರು. ಅವನು ಮಾತಾಡುವುದನ್ನು ನಿಲ್ಲಿಸಿದ ಕೂಡಲೇ ಸೈನ್ಯದ ಒಂದು ಭಾಗದಿಂದ, " ವೀರಪುರ ಮಹಾರಾಜನಿಗೆ ಜೈ ! " ಎಂಬ ಕೂಗು ಕೇಳಿಸಿತು.

ಅದನ್ನನುಸರಿಸಿ ಆ ಸೈನ್ಯದೊಳಗೆ ಅಲ್ಲಲ್ಲಿ ಕಲಕಲವೂ, ಒಬ್ಬರನ್ನೊಬ್ಬರು ದೂಡಿಕೊಳ್ಳುವುದೂ, ನೂಕುನುಗ್ಗಲೂ ಪ್ರಾರಂಭವಾಯಿತು. ನೋಡ ನೋಡುತ್ತಿದ್ದ ಹಾಗೆ ಸೈನ್ಯದ ಒಂದು ದೊಡ್ಡ

ಭಾಗವು ಪ್ರತ್ಯೇಕವಾಗಿ ಬರತೊಡಗಿತು. ಅಂಥವರೆಲ್ಲ ಚಂದ್ರವರ್ಮನು ನಿಂತಿರುವಲ್ಲಿಗೇ ಬರುತ್ತಿದ್ದರು. ಅದರೊಂದಿಗೆ "ಸರ್ಪಕೇತು ಮಹಾರಾಜನಿಗೆ ಜೈ!" ಎಂಬ ಕೂಗೂ ಕೇಳಿಸುತ್ತಿತ್ತು. ಚಂದ್ರವರ್ಮನ ಕಡೆಗೆ ಬರುತ್ತಿದ್ದ ಅಶ್ವಿಕರೂ ಪದಾತಿಗಳೂ ಒಮ್ಮೆಗೇ ಹಿಂದಿರುಗಿ ಭೀಕರಾವೇಶದಿಂದ ಅವರ ಮೇಲೆ ಮುಗಿಬಿದ್ದರು. ಅವರವರೊಳಗೇ ಕಾದಾಟವೆದ್ದಿತು.

ಚಂದ್ರವರ್ಮನು ಹಿಂದಿರುಗಿ ಕಣಿವೆಯಲ್ಲಿರುವ ಸೇನಾನಿ ಧೀರಮಲ್ಲನೊಂದಿಗೆ, "ಧೀರಮಲ್ಲಾ! ಇದೀಗ ಒಳ್ಳೆಯ ಅವಕಾಶ! ಸರ್ಪಕೇತುವಿನ ದೊಡ್ಡದೊಂದು ಭಾಗವು ನಮ್ಮ ಪಕ್ಷಕ್ಕೆ ತಿರುಗಿ ಬಿಟ್ಟಿತು. ಅವೆರೀಗ ಉಳಿದವರೊಂದಿಗೆ ಹೋರಾಡು ತ್ತಿದ್ದಾರೆ. ನೀನು ನಮ್ಮ ಸೈನಿಕರಿಗೆಲ್ಲಾ ಉತ್ಸಾಹ ಬರುವಂತೆ ಹೇಳಿ, ಒಂದೇಬಾರಿಗೆ ಕಣಿವೆಯ ಮುಖ ದ್ವಾರದ ಕಡೆಗೆ ದಾಳಿಮಾಡಿ ಹೊರಗಿನ ಮೈದಾನಕ್ಕೆ ಬಂದುಬಿಟ್ಟೆಯಾದರೆ ಸರ್ಪಕೇತು ಇಕ್ಕುಳದಲ್ಲಿ ಸಿಕ್ಕಿಬಿದ್ದವನಂತೆ ನಾಶವಾಗಿ ಹೋಗುತ್ತಾನೆ. ತ್ವರೆ ಮಾಡು!" ಎಂದು ಕೂಗಿ ಹೇಳಿದನು.

ಅದರಂತೆ ಸೇನಾನಿ ಧೀರಮಲ್ಲನು ತನ್ನ ಸೈನಿಕರಿಗೆ ಹೇಳುವುದಕ್ಕೆ ಮೊದಲೇ, ಸರ್ಪಕೇತು ತನಗೆ ಬರುವ ಕೇಡನ್ನು ಕಂಡುಕೊಂಡುಬಿಟ್ಟನು. ತನ್ನ ಸೈನಿಕರಲ್ಲಿ ಅನೇಕರು ಶತ್ರುಪಕ್ಷ ವಹಿಸಿ, ತನ್ನ ಮೇಲೆಯೇ ಕತ್ತಿ ಎತ್ತುವುದನ್ನು ನೋಡಿದ ಕೂಡಲೇ ಅವನು ತನ್ನ ಅನುಚರರನ್ನು ಕಣಿವೆಯ ಮುಖದ್ವಾರದಿಂದ ಹಿಂದಿರುಗುವಂತೆ ಕೂಗಿ ಕೂಗಿ ಕರೆಯ ತೊಡಗಿದನು. ಹಾಗು ವಿಶ್ವಾಸಿಗಳಾದ ತನ್ನವರೊಂದಿಗೆ ಯುದ್ಧ ರಂಗದಿಂದ ತಪ್ಪಿಸಿಕೊಂಡು ಹೋಗಲಿಕ್ಕೇ ತೊಡಗಿದನು.

ಚಂದ್ರವರ್ಮನೂ, ಧೀರಮಲ್ಲನೂ ತಮ್ಮ ಸೈನ್ಯ ವನ್ನು ಕೂಡಿಕೊಂಡು ಓಡಿಹೋಗುತ್ತಿರುವ ಸರ್ಪ ಕೇತುವಿನ ಬೆಂಬತ್ತಿ ಸಾಗತೊಡಗಿದನು. ಇಕ್ಕಟ್ಟಾದ ಆ ಗುಡ್ಡಗಳ ಮಾರ್ಗದಲ್ಲಿ ಚಂದ್ರವರ್ಮನು ನಡು ಮಧ್ಯಾಹ್ನದವರೆಗೂ ಸರ್ಪಕೇತುವಿನ ಸೈನ್ಯವನ್ನು ಬೆಂಬತ್ತಿದನು.

ಶತ್ರು ಸೈನಿಕರಲ್ಲಿ ಕೆಲವು ಮಂದಿ ಅಶ್ವಿಕರೂ ಪದಾತಿಗಳೂ ಅವನ ಕೈಗೆ ಸೆರೆ ಸಿಕ್ಕಿದರು. ಆದರೆ ಮುಖ್ಯ ಸೈನಿಕರೊಂದಿಗೆ ಸರ್ಪಕೇತು ಚಂದ್ರ ವರ್ಮನ ಕೈಗೆ ಸಿಗದೆ, ಗುಡ್ಡಗಳಲ್ಲಿ ತಪ್ಪಿಸಿಕೊಂಡು ಬಹಳ ದೂರ ಓಡಿಹೋಗಿಬಿಟ್ಟನು.

ಸೇನಾನಿ ಧೀರಮಲ್ಲನೂ, ಚಂದ್ರವರ್ಮನೂ ತಮ್ಮೊಳಗೆ ಮಾತಾಡಿಕೊಂಡು ನಾಲ್ವರು ಅಶ್ವಿಕ ರನ್ನೂ ಹತ್ತುಮಂದಿ ಭಟರನ್ನೂ ಸರ್ಪಕೇತುವಿನ ಜಾಡು ತಿಳಿದು ಬರಲು ಮುಂದೆ ಓಡಿಸಿದನು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






# ಕನಕಶೆಟ್ಟಿಯ ಕಥೆ

**ಬೇ**ತಾಳದಿಂದಲೇ ಬೆನ್ನಿನ ಬಲ ಹೆಚ್ಚಿಸಿಕೊಂಡ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಬೆನ್ನಿನ ಮೇಲೇರಿಸಿ, ಹೆಗಲಲ್ಲಿ ಹಿಡಿದು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡತೊಡಗಿತು : " ಎಲೈ ರಾಜನೇ, ನಡುರಾತ್ರಿಯ ಈ ಅಪರವೇಳೆಯಲ್ಲಿ, ಭಯಂಕರವಾದ ಈ ಸ್ಮಶಾನ ಸ್ಥಳದಲ್ಲಿ ಒಬ್ಬಂಟಿಗನಾಗಿ ನೀನು ಮಾಡುವ ಕಠಿಣ ಶ್ರಮವನ್ನು ನೋಡಿದರೆ ನನಗೆ ಆಶ್ಚರ್ಯದೊಂದಿಗೆ ದಯೆಯೂ ಬರುತ್ತದೆ. ಒಂದು ವೇಳೆ ನೀನು ತಲೆಹಾಕಿದ ಕಾರ್ಯದಲ್ಲಿ ವಿಜಯಿಯಾದರೂ, ನಿನಗೆ ವೃದ್ಧಾಪ್ಯ ದಶೆ ಬಂದ ಮೇಲೆ ಅದು ನಿನ್ನ ಮನಃಶಾಂತಿಯನ್ನು ಕೆಡಸಿದರೂ ಕೆಡಿಸೀತು. ಒಳ್ಳೆಯ ವಯಸ್ಸಿನಲ್ಲಿರುವಾಗ ಬಹಳ ಕಷ್ಟಕಾರ್ಯಗಳನ್ನು ಮಾಡಿ ಕೂಡಹಾಕಿದ ಧನವನ್ನು ವೃದ್ಧಾಪ್ಯ ಬಂದಾಗ ಮನಸ್ಸಿನ ದುರ್ಬಲತೆಯ ಕಾರಣದಿಂದ ಹುಚ್ಚನ ಹಾಗೆ ಧನವನ್ನು ಕಳೆದುಕೊಂಡ ಒಬ್ಬ ಧನಿಕ ವರ್ತಕನ ಕಥೆ

## ಬೇತಾಳಕಥೆಗಳು?...



ಹೇಳುತ್ತೇನೆ, ಕೇಳು. ನಡೆಯುವ ಶ್ರಮ ತಿಳಿಯಲಾರದು" ಎಂದು ಕಥೆಯನ್ನು ಹೇಳಲು ಪ್ರಾರಂಭ ಮಾಡಿತು :

ಕಾಂಚೀಪುರವಾಸಿಯಾಗಿದ್ದ ಕನಕಶೆಟ್ಟಿ ಎಂಬ ವರ್ತಕನು ಅನೇಕ ಬಗೆಯ ವ್ಯಾಪಾರಗಳನ್ನು ಮಾಡಿ, ಲಕ್ಷಗಳನ್ನು ದಾಟಿ ಕೋಟಿಗಟ್ಟಲೆ ಧನ ಗಳಿಸಿದನು. ಸಮುದ್ರ ವ್ಯಾಪಾರದೊಂದಿಗೆ ಧಾನ್ಯಗಳ, ಜವುಳಿಗಳ ವ್ಯಾಪಾರವೂ ಅವನಿಗಿತ್ತು. ಇದೆಲ್ಲಕ್ಕೂ ಮೇಲೆ ಮುಖ್ಯವಾಗಿ ಬಡ್ಡಿ ಲೇವಾದೇವಿಯ ವ್ಯವಹಾರದಲ್ಲಿ ಅವನು ಹಣದಿಂದಲೇ ಹಣಗಳಿಸುತ್ತ ಅಗಣಿತವೆಂಬಷ್ಟು ಲಾಭ ಗಳಿಸಿದನು.

ತನ್ನ ಹತ್ತಿರ ಸಾಲ ಪಡೆದುಕೊಂಡವರಿಂದ ಸ್ವಲ್ಪವೂ ದಯಾದಾಕ್ಷಿಣ್ಯಗಳಿಲ್ಲದೆ, ಚಕ್ರಬಡ್ಡಿಗಳ ಲೆಕ್ಕಕಟ್ಟಿ, ತೀರಿಸಲಾಗದವರ ಸ್ಥಿರಚರ ಸೊತ್ತುಗಳನ್ನೆಲ್ಲಾ ಸೆಳೆದುಕೊಂಡು ತನ್ನದಾಗಿಸಿಕೊಳ್ಳುತ್ತಿದ್ದನು. ಇದರ ಕೆಲಸದಲ್ಲಿ ಅವನು ಯಾರ ಮುಖವನ್ನೂ ನೋಡದೆ, ಲೆಕ್ಕ ಪುಸ್ತಕದಲ್ಲಿಯೇ ಕಣ್ಣಾಗಿರುವನು. ಅದೇ ಅವನ ದೇವರು.

ಹೀಗೆ ಸಂಪಾದಿಸಿದ ಧನದಿಂದ ಕನಕಶೆಟ್ಟಿ ತನ್ನ ಕುಮಾರಿಯರಿಗೆ ದೊಡ್ಡ ದೊಡ್ಡ ಶ್ರೀಮಂತ ಕುಟುಂಬದೊಂದಿಗೆ ವಿವಾಹ ಸಂಬಂಧ ನಡೆಸಿದನು, ಮಗಂದಿರಿಗೆ ಆಸ್ತಿಯಲ್ಲಿ ಭಾಗ ಮಾಡಿಕೊಟ್ಟು, ಅವರುಗಳಿಂದಲೂ ಸ್ವಂತ ವ್ಯಾಪಾರ ಮಾಡಿಸುತ್ತಲೂ ಇದ್ದನು.

ಕಾಲಕ್ರಮದಲ್ಲಿ ಕನಕಶೆಟ್ಟಿಗೆ ವೃದ್ಧಾಪ್ಯವು ಬಂದಿತು. ಆ ಸ್ಥಿತಿಯಲ್ಲಿ ಅವನ ಶರೀರದ ತ್ರಾಣ ತಗ್ಗಿ ವಿಚಾರ ಹಿಡಿಯಿತು. ಅವನಿಗೆ ತಾನು ಅನೇಕಾನೇಕ ಪಾಪಗಳನ್ನು ಮಾಡಿದೆನೆಂದೂ, ಆ ಕಾರಣದಿಂದ ಸತ್ತಮೇಲೆ ನರಕಯಾತನೆ ಅನುಭವಿಸಬೇಕಾಗುತ್ತದೆಂದೂ, ಅದು ಅತ್ಯಂತ ಭಯಂಕರವಾಗಿರುತ್ತದೆಂದೂ ಭೀತಿ ಹುಟ್ಟತೊಡಗಿತು.

ಹೀಗಿರುವಾಗ ನಗರದ ಪರಿಸರದಲ್ಲಿರುವ ಶಾಂತಿವನದಲ್ಲಿ ಒಬ್ಬ ಯೋಗೀಶ್ವರನು ಬಂದು ತಂಗಿರುವನೆಂದು ಜನರ ಮೂಲಕ ಸಮಾಚಾರ ಕನಕಶೆಟ್ಟಿಗೆ ತಿಳಿಯಿತು. ಆ ಯೋಗಿ ದೊಡ್ಡ ಮಹಾತ್ಮನೆಂದೂ, ತನ್ನನ್ನು ನೋಡಲು ಬಂದವರ ಕಷ್ಟ ಸಮಸ್ಯೆಗಳನ್ನು ಕೇಳಿ, ತಕ್ಕ ಪರಿಹಾರದ ಮಾರ್ಗ ತೋರಿಸುತ್ತಾನೆಂದೂ, ಬಹಳ ದಯಾಶಾಲಿಯೆಂದೂ ಜನರು ಹೇಳಿಕೊಳ್ಳುತ್ತಿದ್ದರು. ಅವನ ಆಲೋಚನೆ ಕೇಳಬೇಕೆಂದು ತೋರಿತು ಕನಕಶೆಟ್ಟಿಗೆ.

ಒಂದು ದಿನ ಕನಕಶೆಟ್ಟಿ ಶಾಂತಿವನಕ್ಕೆ ಹೋಗಿ, ಯೋಗೀಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ತಾನು ಬಂದ ಸಂಗತಿಯನ್ನು ಹೇಳಲು ಬಾಯಿ ತೆರೆಯಲಿದ್ದನು.

ಅಷ್ಟರಲ್ಲೇ ಯೋಗಿ ಅವನನ್ನು ತಡೆದು, "ನಿನ್ನ ಸಮಾಚಾರವೆಲ್ಲವೂ ನನಗೆ ಗೊತ್ತಿದೆ. ನೀನು ಮಾಡಿದ ಪಾಪಗಳೆಲ್ಲ ಹೋಗಬೇಕಾದರೆ,



ಅನ್ನದಾನ ಮಾಡುವುದೊಂದೇ ದಾರಿ. ದಿನಕ್ಕೆ ನೂರು ಮಂದಿಯಂತೆ, ಹತ್ತು ಸಾವಿರ ಮಂದಿಗೆ ಅನ್ನದಾನ ಮಾಡಿದ ಹೊರತು ನಿನ್ನ ಪಾಪಗಳಿಗೆ ಪರಿಹಾರವಾಗುವುದಿಲ್ಲ" ಎಂದನು.

ಯೋಗಿಯ ಮಾತನ್ನು ಕೇಳಿದ ಕೂಡಲೇ ಕನಕಶೆಟ್ಟಿಗೆ ಬೆಪ್ಪೂ ಬೆರಗೂ ಒಟ್ಟಿಗೇ ಹಿಡಿಯಿತು. ದಿನಕ್ಕೆ ನೂರು ಮಂದಿಗೆ ಸ್ವಂತ ಹಣದಿಂದ ಭೋಜನ ಮಾಡಿಸಬೇಕಾದರೆ ಅವನ ಮನಸ್ಸು ಒಪ್ಪಲಿಲ್ಲ. ಮಗಂದಿರೂ ಒಪ್ಪಲಿಕ್ಕಿಲ್ಲ. ಅಪ್ಪನಿಗೆ ಏನೋ ಮುದಿಹುಚ್ಚು ಅಂದುಕೊಂಡಾರು.

"ಕ್ಷಮಿಸಬೇಕು ಸ್ವಾಮಿ, ಅಷ್ಟು ಮಂದಿಗೆ ಭೋಜನ ಹಾಕಿಸುವ ಶಕ್ತಿ ನನಗಿಲ್ಲ. ಬೇರೇನಾದರೂ ದಾರಿ ಹೇಳಬೇಕು ಮಹಾಸ್ವಾಮಿ" ಎಂದು ಕೇಳಿ ಕೊಂಡನು.

ಯೋಗಿ ಮುಗುಳುನಗು ಸೂಸಿ, "ಮುಖ್ಯವಾಗಿ ನೀನು ಬಡ್ಡೀ ವ್ಯವಹಾರದಲ್ಲಿ ಧನ ಸಂಪಾದನೆಯೊಂದಿಗೆ ಪಾಪವನ್ನು ಸೇರಿಸಿಯೇ ಸಂಪಾದಿಸಿರುವಿ. ದಿನಕ್ಕೆ ನೂರು ಮಂದಿಯ ಕ್ರಮದಲ್ಲಿ ಹತ್ತು ವರ್ಷಗಳವರೆಗೆ ಅನ್ನದಾನ ಮಾಡಿದರೂ ನಿನ್ನ ಆಸ್ತಿ ಕರಗಲಾರದೆಂಬ ಸಂಗತಿ ನನಗೆ ಗೊತ್ತಿದೆ. ಇಲ್ಲದ ಸಂದೇಹಕ್ಕೊಳಗಾಗಿ ಅಸತ್ಯದ ಮಾತುಗಳಿಂದ ನನ್ನನ್ನು ವೃಥಾ ರೇಗಿಸಬೇಡ" ಎಂದನು ಶಾಂತವಾಗಿಯೇ.

ಕನಕಶೆಟ್ಟಿ ಮತ್ತೇನೂ ಮಾತಾಡದೆ ತಲೆಬಗ್ಗಿಸಿ ಕೊಂಡು ಸುಮ್ಮನಿದ್ದನು. ಯೋಗಿ ಸ್ವಲ್ಪಹೊತ್ತು ಸುಮ್ಮನಿದ್ದು, ಆಮೇಲೆ ಏನೋ ಮಂತ್ರ ಜಪಿಸಿ, ಒಂದು ಬೆಳ್ಳಿ ಪಾತ್ರವನ್ನು ಸೃಷ್ಟಿಸಿ, "ಕನಕಶೆಟ್ಟೀ, ನೀನು ಪಾಪಿ ಮಾತ್ರವೇ ಅಲ್ಲ, ಪರಮ ಲೋಭಿ ಕೂಡಾ. ನಿನಗೆ ಈ ಬೆಳ್ಳೀ ಪಾತ್ರ ಕೊಡುತ್ತೇನೆ. ಈ ಪಾತ್ರ ನಿನಗೆ ಮೂರು ದಿನಗಳವರೆಗಷ್ಟೇ ದಾನದ ಉಪಯೋಗಕ್ಕೆ ಬರುತ್ತದೆ. ಈ ಮೂರು ದಿನಗಳ ಕಾಲದಲ್ಲಿ ನೀನು ಹತ್ತು ಸಾವಿರ ಮಂದಿಗೆ ಇದರ ಸಹಾಯದಿಂದ ಅನ್ನದಾನ ಮಾಡಬೇಕು. ಗಡುವಿನೊಳಗೆ ನೀನು ಹಾಗೆ ಮಾಡದೆ ಹೋದರೆ ನಿನ್ನ ತಲೆ ಒಡೆದು ಹೋಗಿ ನೀನು ಸಾಯುವಿ" ಎಂದು ಒಂದು ಬೆಳ್ಳಿಯ ಪಾತ್ರವನ್ನು ಕನಕಶೆಟ್ಟಿಗೆ ಕೊಟ್ಟನು.

ಕನಕಶೆಟ್ಟಿ ಆ ಪಾತ್ರದ ಸಹಾಯದಿಂದ ಅನ್ನದಾನ ಮಾಡಲು ಪ್ರಾರಂಭಿಸಿದನು. ದಿನಾ ರಾತ್ರಿ ಹತ್ತು ಗಂಟೆಯವರೆಗೂ ಅನೇಕ ಮಂದಿ ಅವನ ಮನೆಯಲ್ಲಿ ಊಟಮಾಡಿ ಹೋಗುತ್ತಿದ್ದರು. ಹೀಗೆ ಎರಡು ದಿನಗಳು ಕಳೆಯಿತು. ಮೂರನೇ ದಿನ ರಾತ್ರಿ ಹತ್ತು ಗಂಟೆಯ ಹೊತ್ತಿಗೆ ಯೋಗಿ ಹೇಳಿದ ಸಂಖ್ಯೆಗೆ ಹತ್ತು ಮಂದಿ ಕಡಿಮೆಯಾದರು. ಯೋಗಿ ಹೇಳಿದ ಎಚ್ಚರಿಕೆ ನೆನಪಿತ್ತು.

ಕನಕಶೆಟ್ಟಿ ಬಹಳ ಗಾಬರಿಬಿದ್ದು, ಓಡುತ್ತಾ ಬೀದಿಗೆ ಹೋಗಿ ಅಲ್ಲಲ್ಲಿ ಅಲೆದು, ಹೇಗೋ ಎಂಟು



ಜನರನ್ನು ಕರೆದುಕೊಂಡು ಬಂದು ಅವರಿಗೆ ಭೋಜನ ಮಾಡಿಸಿದನು. ಇನ್ನೂ ಇಬ್ಬರು ಊಟ ಮಾಡಬೇಕಾಗಿತ್ತು. ಆಗಲೇ ಲೆಕ್ಕ ಸರಿಯಾಗುತ್ತದೆ. ಏನೂ ತೋರಲಿಲ್ಲ ಕನಕಶೆಟ್ಟಿಗೆ.

ಆಗಲೇ ಬಹಳ ಹೊತ್ತಾಗಿತ್ತು. ಕನಕಶೆಟ್ಟಿ ಬಹಳ ಆಲೋಚನೆ ಮಾಡಿದನು. ಅಡಿಗೇ ಕೋಣೆಗೆ ಹೋಗಿ ಎರಡು ಬಾಳೇ ಎಲೆಗಳಲ್ಲಿ ಬೆಳ್ಳಿ ಪಾತ್ರದ ಸಹಾಯದಿಂದ ಊಟದ ಪದಾರ್ಥಗಳನ್ನು ಬಡಿಸಿ, ಅವುಗಳನ್ನು ಅಡಿಗೇ ಕೋಣೆಯ ಮಧ್ಯದಲ್ಲಿ ಇರಿಸಿ, ದೇವರೇ ಗತಿಯೆಂದುಕೊಂಡು ತನ್ನ ತಲೆ ಒಡೆದು ಸಾಯುವೆನೇನೋ ಎಂದು ಹೆದರುತ್ತಾ ಮಲಗುವ ಕೋಣೆಗೆ ಹೋಗಿ ಹಾಸಿಗೆಯಲ್ಲಿ ಮಲಗಿದನು.

ಸ್ವಲ್ಪಹೊತ್ತಿನ ಮೇಲೆ ಬೆಳಗಾಯಿತು. ಪಕ್ಷಿಗಳ ಕಲಕಲನಾದಗಳಿಂದ, ಬೀದಿಯಲ್ಲಿ ಓಡಾಡುವ ಜನರ ಶಬ್ದಗಳಿಂದ, ವಾಹನಗಳ ಓಡಾಟದ ಮೊರೆತಗಳಿಂದ ಕನಕಶೆಟ್ಟಿಗೆ ಎಚ್ಚರಿಕೆ ಬಂದು ಕಣ್ಣು ಬಿಡಿಸಿ ನೋಡಿದನು. ತನ್ನ ತಲೆಯನ್ನು ಮುಟ್ಟಿ ನೋಡಿಕೊಂಡನು. ಇನ್ನೂ ತಾನು ಬದುಕಿರುವುದನ್ನು ತಿಳಿದು ಅವನಿಗೆ ಎಲ್ಲಿಲ್ಲದಷ್ಟು ಸಂತೋಷವೂ ಆಶ್ಚರ್ಯವೂ ಒಟ್ಟಿಗೇ ಉಂಟಾಗಿ, ಅಡಿಗೇ ಕೋಣೆಗೆ ಓಡುತ್ತಾ ಹೋದನು.

ಅಲ್ಲಿ ರಾತ್ರಿ ಅವನು ಬಡಿಸಿಟ್ಟಿದ್ದ ಎರಡು ಎಲೆಗಳಲ್ಲಿಯೂ ಏನೂ ಇರಲಿಲ್ಲ. ಯಾರೋ ಪೂರ್ತಿ ಉಂಡುಬಿಟ್ಟಿದ್ದರು. ಅಲ್ಲಿಯೇ ಇಟ್ಟಿದ್ದ ಬೆಳ್ಳಿ ಪಾತ್ರವೂ ಕಾಣಲಿಲ್ಲ.

ಕನಕಶೆಟ್ಟಿಗೆ ಇದು ಯಾರೋ ಕಳ್ಳರ ಕೆಲಸವಿರಬೇಕೆಂದು ಅನುಮಾನವಾಯಿತು. ಅವನು ತನ್ನ ಧನದ ಸಂಗ್ರಹವಿರುವ ಕೋಣೆಯೊಳಗೆ ಗಬಗಬನೆ ಹೋದನು. ಅವನ ಅನುಮಾನವು ನಿಜವಾಗಿತ್ತು. ರಾತ್ರಿ ಬಡಿಸಿಟ್ಟಿದ್ದ ಊಟವನ್ನು ಮಾಡಿದ ಇಬ್ಬರು ಕಳ್ಳರು ಧನವೂ ನಗಗಳೂ ಇರುವ ಪೆಟ್ಟಿಗೆಯನ್ನು ಒಡೆದು ಎಲ್ಲವನ್ನೂ ದೋಚಿಕೊಂಡು ಹೋಗಿದ್ದರು.

ಕನಕಶೆಟ್ಟಿ ದಿಗಿಲಿನಿಂದ ಎರಡು ಕ್ಷಣ ಸ್ತಂಭಿತನಾಗಿ, ಕೂಡಲೇ ಸಮಾಳಿಸಿಕೊಂಡು ಕೋಣೆಯಿಂದ ಹೊರಗೆ ಬಂದನು. ಬೀದಿಬಾಗಿಲ ಹತ್ತಿರ ಯಾರೋ ತನ್ನನ್ನು ಹೆಸರು ಹಿಡಿದು ಕೂಗಿ ಕರೆಯುವುದು ಕೇಳಿಸಿತು. ಬೇಗ ಬೇಗನೇ ಹೋಗಿ ಬಾಗಿಲು ತೆರೆದು ನೋಡಿದನು.

ಬೀದಿಯಲ್ಲಿ ಸಣ್ಣದೊಂದು ಜನರ ಗುಂಪೇ ನಿಂತಿದ್ದಿತು. ಅವರೊಳಗಿನಿಂದ ಹತ್ತು ಮಂದಿ, ಕೈಗಳನ್ನು ಹಗ್ಗದಿಂದ ಬಿಗಿದು ಕಟ್ಟಿದ ಇಬ್ಬರು ಕಟ್ಟಾಳುಗಳನ್ನು ಎಳೆದುತಂದು ಕನಕಶೆಟ್ಟಿಯ ಮುಂದೆ ನಿಲ್ಲಿಸಿ, "ಶೆಟ್ಟಿಯವರೇ, ಇವರಿಬ್ಬರೂ ಬೆಳಂಜಾಮದಲ್ಲಿ ನಿಮ್ಮ ಮನೆಯ ಹಿಂದಿನ ಬಾಗಿಲಿನಿಂದ ಹೊರಗೆ ಬರುವುದನ್ನು ನೋಡಿ ಅನುಮಾನದಿಂದ ಹಿಡಿದೆವು. ಇವರು ಕಳ್ಳರೇ ನಿಜ. ಇವರ

ಹತ್ತಿರವಿದ್ದ ಈ ಎರಡು ಮೂಟೆಗಳನ್ನು ಬಿಚ್ಚಿ ನೋಡಿರಿ" ಎಂದರು.

ಕನಕಶೆಟ್ಟಿ ಹಾಗೆಯೇ ನೋಡಿದಾಗ, ತನ್ನ ಮನೆಯಲ್ಲಿದ್ದ ಧನವೂ ಆಭರಣಗಳೂ ಮೂಟೆಯಲ್ಲಿದ್ದುವು. ಅವನು ತಾನೇ ಸ್ವತಃ ಆ ಎರಡು ಮೂಟೆಗಳನ್ನೂ ಬಿಗಿದು ಕಟ್ಟಿ, ಕಳ್ಳನ ಭುಜಗಳನ್ನು ತಟ್ಟಿ, "ಹೆದರಬೇಡಿ. ಈ ಧನ ನಿಮ್ಮದೇ" ಎಂದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಕನಕಶೆಟ್ಟಿಯ ಪ್ರವರ್ತನೆಯ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ? ಅಡ್ಡದಾರಿ ಹಿಡಿದು ಅನ್ಯಾಯದಿಂದ ಪಾಪಮಾಡಿ ಗಳಿಸಿದ ಧನವನ್ನು ಹಾಗೆ ಕಳ್ಳರಿಗೇ ಕೊಟ್ಟಿದ್ದಾನೆ. ಅದು ವೃದ್ಧಾಪ್ಯ ದಶೆಯಲ್ಲಿ ಬಂದ ಮನೋದೌರ್ಬಲ್ಯ ತಾನೇ ? ಅಥವಾ ಆ ಇಬ್ಬರು ಕಳ್ಳರೂ ತನ್ನನ್ನು ಪ್ರಾಣಾಪಾಯದಿಂದ ಕಾಪಾಡಿದರೆಂಬ ಕೃತಜ್ಞತೆಯೋ ? ಈ ಸಂದೇಹಕ್ಕೆ ಸರಿಯಾದ ಉತ್ತರ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆ ಒಡೆದುಹೋಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಕನಕಶೆಟ್ಟಿ ಯೋಗಿಯನ್ನು ದರ್ಶನ ಮಾಡಿದ್ದು ಪ್ರಾಣಭಯದಿಂದ ಅಲ್ಲ. ಅದನ್ನು ಗಮನಿಸಬೇಕಾದ್ದು ಬಹು ಮುಖ್ಯ. ತಾನು ಮಾಡಿದ ಪಾಪಗಳಿಗೆ ಪರಿಹಾರ ದೊರಕದೆಯೇ ಸತ್ತು ನರಕಕ್ಕೆ ಹೋಗಬೇಕಾಗಿ ಬರುತ್ತದೆಂಬುದೇ ಅವನನ್ನು ಹಿಡಿದು ಪೀಡಿಸುತ್ತಿದ್ದ ಸಮಸ್ಯೆ. ಅದಕ್ಕೆ ಯೋಗಿ ಪರಿಹಾರ ಮಾರ್ಗ ಹೇಳಿದನು. ಆದರೆ ತಾನು ಮೂರು ದಿನಗಳಲ್ಲಿ ಹತ್ತು ಸಾವಿರ ಮಂದಿಗೆ ಅನ್ನದಾನ ಮಾಡಬೇಕು. ಮೂರನೇ ದಿನದಲ್ಲಿ ಹತ್ತು ಸಾವಿರವಾಗಲು ಇಬ್ಬರು ಕಡಿಮೆಯಾದರು. ಅಂದರೆ ಯೋಗಿ ಹೇಳಿದಂತೆ ಆ ದಿನ ತಾನು ಸಾಯುತ್ತೇನೆಂದುಕೊಂಡನು. ಹತ್ತು ಸಾವಿರ ಮಂದಿಗೆ ಅನ್ನದಾನ ಮಾಡಲು ವಿಫಲನಾದ ಕಾರಣದಿಂದ ತನಗೆ ನರಕಬಾಧೆಯೂ ತಪ್ಪುವುದಿಲ್ಲವೆಂದು ಹೆದರಿದನು. ಕಡೆಗೆ ಅದೃಷ್ಟವಶದಿಂದ ಇಬ್ಬರು ಕಳ್ಳರಿಂದಾಗಿ ಅಂತಹ ಅಪಾಯ ತಪ್ಪಿತು. ಇನ್ನು ತನಗೆ ನರಕಬಾಧೆಯ ಭಯವಿಲ್ಲ. ಆ ಕಾರಣದಿಂದಲೇ ಅವನು ಕಳ್ಳರಿಗೆ ತನ್ನ ಮನೆಯಲ್ಲಿ ಕದ್ದುಕೊಂಡುದನ್ನು ಹಾಗೆಯೇ ಆದರಪೂರ್ವಕವಾಗಿ ಕೊಟ್ಟುಬಿಟ್ಟನು. ಕನಕಶೆಟ್ಟಿಯದು ನರಕದ ಭಯವೇ ಹೊರತು ಪ್ರಾಣಭಯವಲ್ಲ. ಅವನಲ್ಲಿ ಮನೋದೌರ್ಬಲ್ಯವಿದೆಯೆಂಬುದೂ ಸರಿಯಲ್ಲ."

ಹೀಗೆ ರಾಜನಿಗೆ ಮೌನಭಂಗವಾಗುತ್ತಲೇ, ಬೇತಾಳವು ಶವಸಮೇತ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತ್ತು.





# ಕಳ್ಳರ ಔತಣ

ಒಂದು ಊರಿನಲ್ಲಿ ಭೀಮಶಂಕರನೆಂಬ ಯುವಕನೊಬ್ಬನಿದ್ದನು. ಅವನು ಒಂದು ದಿನ ಪಕ್ಕದ ಊರಿನಲ್ಲಿದ್ದ ತನ್ನ ಬಂಧುಗಳ ಮನೆಯ ಮದುವೆಗೆ ಹೋಗಿ, ಸಾಯಂಕಾಲದ ಹೊತ್ತಿನಲ್ಲಿ ತನ್ನ ಊರಿಗೆ ಹಿಂದಿರುಗಿ ಬರುತ್ತಿದ್ದನು. ಹಾಗೆ ಒಂದು ಕಾಡು ದಾರಿಯಲ್ಲಿ ನಡೆಯುತ್ತಿದ್ದಾಗ ಹೊತ್ತು ಮುಳುಗುತ್ತಿರಲು, ಥಕ್ಕನೆ ಮಳೆ ಪ್ರಾರಂಭವಾಯಿತು. ನೆನೆಯದಂತೆ ಎಲ್ಲಿ ನಿಲ್ಲುವುದೆಂದು ಅತ್ತಿತ್ತ ನೋಡುತ್ತಿರಲು ಸಮೀಪದಲ್ಲಿ ಒಂದು ಪಾಳುಬಿದ್ದು ಹೋಗಿದ್ದ ದೊಡ್ಡದೊಂದು ಮನೆ ಕಂಡಿತು.

ಭೀಮಶಂಕರನು ಆ ಮುರುಕು ಮನೆಗೆ ಹೋಗಿ, ಅದರೊಳಗಿನ ಒಂದು ಕೊಠಡಿಯಲ್ಲಿ ಕುಳಿತನು. ಸ್ವಲ್ಪಹೊತ್ತಿಗೆ ಇಪ್ಪತ್ತೈದು ಮಂದಿ ಕಳ್ಳರು ತಮ್ಮ ನಾಯಕನೊಂದಿಗೆ ಅದೇ ಮನೆಗೆ ಬಂದರು.

ಕುದುರೆಗಳ ಮೇಲೆ ಬಂದಿದ್ದ ಆ ಕಳ್ಳರು ಮನೆಯ ಹತ್ತಿರ ಕುದುರೆಯಿಂದಿಳಿದು, ತಾವು ತಂದಿದ್ದ ಕಟ್ಟಿಗೆ, ಅಕ್ಕಿ, ಬೇಳೆ ಮೊದಲಾದ ಅಡಿಗೇ ಸಾಮಗ್ರಿಗಳ ಮೂಟೆಗಳನ್ನು ಆ ಮನೆಯೊಳಗೆ ಹೊತ್ತುಕೊಂಡು ಬಂದರು. ಅವರ ನಾಯಕನು ಅವರೊಂದಿಗೆ, "ಈ ಗಾಳೀ ಮಳೆ ಬೇಗನೇ ತಗ್ಗುವುದಿಲ್ಲ. ಈ ರಾತ್ರಿಯನ್ನು ನಾವು ಇಲ್ಲಿಯೇ ಕಳೆಯಬೇಕಾಗಿದೆ. ಒಳ್ಳೆಯ ಔತಣದ ಭೋಜನವನ್ನೇ ತಯಾರಿಸಿಬಿಡಿ" ಎಂದನು. ಕೂಡಲೇ ನಾಲ್ವರು ಕಳ್ಳರು ಕಲ್ಲಿನ ಒಲೆಗಳನ್ನು ಮಾಡಿ ಬೆಂಕಿ ಉರಿಸಿ ಔತಣದ ಅಡಿಗೆ ತಯಾರು ಮಾಡಿದರು. ಅದೆಲ್ಲ ತಯಾರಾಗಲು ಮೂರು ಗಂಟೆ ಹೊತ್ತು ಹಿಡಿಯಿತು. ದೂರದ ಕತ್ತಲೆ ಮೂಲೆಯಲ್ಲಿದ್ದ ಭೀಮಶಂಕರನಿಗೆ ಬೇಯುವ ಅಡಿಗೆ ಪದಾರ್ಥಗಳ ಸುವಾಸನೆಯಿಂದ ಹೊಟ್ಟೆಯಲ್ಲಿ ಹಸಿವೆಯೆದ್ದು ಬಾಯಿಯಲ್ಲಿ ನೀರೊಸರ ತೊಡಗಿತು.

ಸಹಜವಾಗಿಯೇ ಭೀಮಶಂಕರನು ಧೈರ್ಯಶಾಲಿ ಯುವಕ. ಸಮಯಸ್ಫೂರ್ತಿಯ ಚುರುಕು ಬುದ್ಧಿಯುಳ್ಳವನು. ಅವನು ಮೆಲ್ಲನೆ ಆ ಕೋಣೆಯೊಳಗಿನಿಂದ ಹೊರಗೆ ಬಂದು, ಕಳ್ಳರು ಕಾಣದಂತೆ ಅವರ ವಸ್ತ್ರದ ಮೂಟೆಯಿಂದ ಒಂದು ಜತೆ ಬಟ್ಟೆಗಳನ್ನು ತೆಗೆದುಕೊಂಡು ತಾನು ಧರಿಸಿ, ಕಳ್ಳರ ಹಾಗೆಯೇ ತಯಾರಾದನು. ಅದೇ ಹೊತ್ತಿಗೆ ಸರಿಯಾಗಿ ಕಳ್ಳರು ಕೋಣೆಯಲ್ಲಿ ಎಲೆಗಳನ್ನು ಸಾಲಾಗಿ

ಎಸ್. ಎನ್. ಮೂರ್ತಿ



ಹಾಕಿದರು. ಎಲೆ ಹಾಕಿದ ಆ ಕೋಣೆಯಲ್ಲಿ ಚಿಕ್ಕದೊಂದು ದೀಪದ ಬುಡ್ಡಿ ಬೆಳಗಿಸಿಟ್ಟಿದ್ದರು. ಅದು ಮಿಣುಕು ಮಿಣುಕೆಂದು ಅಲಿವಾಲಿಕೊಂಡಿತ್ತು. ಕೋಣೆಯಲ್ಲಿ ಬೆಳಕಿಗಿಂತ ಕತ್ತಲೆಯೇ ಹೆಚ್ಚಾಗಿತ್ತು.

ಕಳ್ಳರ ನಾಯಕನು ಹಾಕಿದ ಎಲೆಗಳನ್ನು ಲೆಕ್ಕ ಮಾಡಿ, "ನಾವು ಇಪ್ಪತ್ತಾರು ಮಂದಿ ತಾನೇ? ನಾಲ್ವರು ಅಡಿಗೇ ಮಾಡಿದರೆ ಉಳಿದವರು ಇಪ್ಪತ್ತೆರಡು ಮಂದಿ. ಆ ನಾಲ್ವರೂ ಬಡಿಸುವಾಗ, ಇಲ್ಲಿ ಇಪ್ಪತ್ತಮೂರು ಎಲೆಗಳ ಮುಂದೆ...ಏನಿದು? ಎಲ್ಲರೂ ಕೂಡಿ ಇಪ್ಪತ್ತೇಳು ಮಂದಿ ಹೇಗೆ ಆದೆವು? ನಮ್ಮಲ್ಲಿ ಯಾರೋ ಒಬ್ಬನು ಹೊರಗಿನವನಿದ್ದ ಹಾಗಿದೆ" ಎಂದನು.

ನಾಯಕನ ಮಾತು ಕೇಳಿ ಎಲ್ಲರೂ ಆಶ್ಚರ್ಯಪಡುತ್ತ ಎಲೆಯ ಮುಂದೆ ಕುಳಿತಿದ್ದವರು ಪರಸ್ಪರ ಮುಖ ನೋಡಿಕೊಳ್ಳುತ್ತಿರಲು, ಅವರ ನಾಯಕನು, "ಆ ಹೊರಗಿನವನನ್ನು ಹಿಡಿಯುವುದು ಬಹು ಸುಲಭ. ಅದಕ್ಕೊಂದು ದಾರಿ ಇದೆ!" ಎಂದನು. ಕೂಡಲೇ ಅವನು ತನ್ನ ಮುಖ್ಯ ಅನುಚರನನ್ನು ಹತ್ತಿರ ಕರೆದು, ಉಳಿದ ಕಳ್ಳರೊಂದಿಗೆ, ನಾವಿಬ್ಬರು ಆ ಪಕ್ಕದ ಕೋಣೆಯಲ್ಲಿ ಇರುತ್ತೇವೆ. ನೀವು ಒಬ್ಬೊಬ್ಬರೂ ಆ ಕೋಣೆಗೆ ಬನ್ನಿ. ನಾನು ಈ ಉರಿಯುವ ಚುಟ್ಟದಿಂದ ಅವನಿಗೆ ಕಾಯಿಸಿಡುತ್ತೇನೆ. ಆ ನೋವನ್ನು ತಾಳಲಾಗದೆ ಯಾವನು ಕೂಗುತ್ತಾನೋ ಅವನೇ ಹೊರಗಿನವನು. ಅವನನ್ನು ಮರಕ್ಕೆ ನೇತುಹಾಕಿ ಬಿಡುತ್ತೇನೆ" ಎಂದನು.

ಆಮೇಲೆ ಕಳ್ಳರ ನಾಯಕನೂ, ಅವನ ಅನುಚರನೂ ಪಕ್ಕದ ಕೋಣೆಗೆ ಹೋದರು. ಒಬ್ಬೊಬ್ಬ ಕಳ್ಳನೂ ಆ ಕೋಣೆಗೆ ಹೋದ ಸ್ವಲ್ಪಹೊತ್ತಿಗೆ 'ಅಬ್ಬ!' ಎಂಬ ಸಣ್ಣ ಸಹನೆಯ ಸದ್ದು ಮಾತ್ರ ಕೇಳುತಿತ್ತು. ಆಮೇಲೆ ನಾಯಕನು ಮತ್ತೊಬ್ಬನನ್ನು ಕರೆಯುತ್ತಿದ್ದನು.

ಅದನ್ನು ಗಮನಿಸಿದ ಭೀಮಶಂಕರನು ಕಳ್ಳರ ನಾಯಕನು ಯಾರಿಗೂ ಚುಟ್ಟದ ಬೆಂಕಿಯಿಂದ ಕಾಯಿಸಿಡುವುದಿಲ್ಲವೆಂದು ಊಹಿಸಿಕೊಂಡನು. ಅವನ ಸರದಿಯೂ ಬಂತು. ಅವನು ಒಳಗೆ ಹೋದ ಕೂಡಲೇ ನಾಯಕನ ಮುಖ್ಯಾನುಚರನು "ಅಬ್ಬಾ" ಎಂದು ಸಣ್ಣಗೆ ಹೇಳಿ ಭೀಮಶಂಕರನನ್ನು ಗೋಡೆಯ ಬದಿಯಲ್ಲಿ ಕುಳ್ಳಿರಿಸಿದನು. ಸ್ವಲ್ಪಹೊತ್ತಿನ ಮೇಲೆ ಎಲ್ಲ ಕಳ್ಳರದೂ ಪರೀಕ್ಷೆಯಾಯಿತು.

ಆಗ ಕಳ್ಳರ ನಾಯಕನು ಅವರೊಂದಿಗೆ, "ನಮ್ಮ ನಡುವೆ ಸೇರಿದ ಆ ಹೊಸಬನು ದೊಡ್ಡ ತಂತ್ರಗಾರನಾಗಿದ್ದಾನೆ. ಅವನ ಮೇಲೆ ನನ್ನ ಉಪಾಯ ನಾಟಲಿಲ್ಲ. ಈಗ ಅವನನ್ನು ಹಿಡಿಯದೆ ಬಿಡಲಾರೆ. ನಾನು ಆಚೆಯ ಕೋಣೆಯಲ್ಲಿರುತ್ತೇನೆ. ನೀವು ಒಬೊಬ್ಬರೇ ನನ್ನ ಹತ್ತಿರ ಬಂದು ಈ ದಿನ ರಾತ್ರಿ ನಮ್ಮ ಸಂಕೇತ ಶಬ್ದವೇನೆಂಬುದನ್ನು ಹೇಳಿ ಹೋಗ

ಬೇಕು" ಎಂದನು. ಹಾಗೆಯೇ ಒಬ್ಬೊಬ್ಬ ಕಳ್ಳನೂ ತಮ್ಮ ನಾಯಕನಿರುವ ಕೋಣೆಗೆ ಹೋಗಲು ತೊಡಗಿದನು. ಅವರ ಸಂಕೇತ ಶಬ್ದ ಏನೆಂದು ತಿಳಿಯದ ಭೀಮಶಂಕರನಿಗೆ ಭಯ ಹತ್ತಿ ಕೊಂಡಿತು. ಅಷ್ಟರಲ್ಲಿ ಅಡಿಗೆ ಮಾಡಿಕೊಂಡಿದ್ದಾಗ ಒಬ್ಬನು ತನ್ನ ಪಕ್ಕದವನನ್ನು ನೋಡಿ "ಶುದ್ಧ ಮರೆಗೂಳಿ ಮಂಗ ನೀನು!" ಎಂದು ಹೇಳಿದ ಮಾತು ಈಗ ನೆನಪಿಗೆ ಬಂತು.

ಭೀಮಶಂಕರನು ಅವನ ಬಳಿಗೆ ಹೋಗಿ ಕಿವಿ ಯಲ್ಲಿ, "ಮೊದಲೇ ನಿನಗೆ ಮರೆವು ಜಾಸ್ತಿ. ಈಗ ಆ ಸಂಕೇತ ಶಬ್ದ ಮರೆತಿಲ್ಲವಷ್ಟೆ?" ಎಂದು ಗುಸು ಗುಟ್ಟಿದನು. ಅದಕ್ಕೆ ಅವನು ರೇಗಿಕೊಂಡು, "ಲಂಬಾ ಲುಂಬಾ! ಈ ಸಣ್ಣ ಮಾತು ನೆನಪಿಲ್ಲಾ ಅಂದುಕೊಂಡಿಯಾ! ಬಾಯಿಮುಚ್ಚು!" ಎಂದು ಗುಸುಗುಟ್ಟಿದನು.

ಭೀಮಶಂಕರನಿಗೆ ಬೇಕಾದುದು ಸಿಕ್ಕಿದ ಸಂತೋಷ ದಲ್ಲಿ ತನ್ನ ಸರದಿ ಬಂದ ಕೂಡಲೇ ನಾಯಕನ ಹತ್ತಿರ ಹೋಗಿ "ಲಂಬಾ ಲುಂಬಾ" ಎಂದನು.

ಎಲ್ಲಾ ಕಳ್ಳರೂ ಸಂಕೇತ ಶಬ್ದ ಹೇಳಿ ಮುಗಿದ ಮೇಲೆ ಕಳ್ಳರ ನಾಯಕನು "ಎಲ! ನಮ್ಮ ನಡುವೆ ಸೇರಿದವನು ಮಹಾ ಬುದ್ಧಿಶಾಲಿಯಾಗಿದ್ದಾನೆ! ಅಂಥವರ ಮೇಲೆ ನನಗೆ ಬಹಳ ಗೌರವ! ಅವನು ತಾನಾಗಿ ಮುಂದೆ ಬಂದು ನಿಜ ಹೇಳಿಬಿಟ್ಟರೆ ಅವನಿಗೆ ಉತ್ತಮವಾದ ಔತಣ ಮಾಡಿಸಿ, ಬಹು ಮಾನ ಕೂಡಾ ಕೊಟ್ಟು ಬಿಟ್ಟುಬಿಡುತ್ತೇನೆ. ಈ ಮಾತು ಪ್ರಮಾಣ ಮಾಡಿಯೇ ಹೇಳುತ್ತೇನೆ!" ಎಂದನು.

ಕೂಡಲೇ ಭೀಮಶಂಕರನು ಮುಂದೆ ಬಂದು, ಕಳ್ಳರ ನಾಯಕನಿಗೆ ವಂದಿಸಿ ನಡೆದ ಸಂಗತಿಯ ನ್ನೆಲ್ಲಾ ಹೇಳಿ "ನಿಜಕ್ಕೂ ತುಂಬಾ ಹಸಿವಿನಲ್ಲಿದ್ದೇನೆ. ಅದಕ್ಕೆ ಸರಿಯಾಗಿ ನಿಮ್ಮ ಅಡಿಗೆ ಪದಾರ್ಥಗಳ ಸುವಾಸನೆ ನನ್ನನ್ನು ಇಷ್ಟು ಸಾಹಸಕ್ಕೆ ಪ್ರೇರೇಪಿ ಸಿತು" ಎಂದನು.

ಆ ಮಾತು ಕೇಳಿ ಕಳ್ಳರ ನಾಯಕನು ದೊಡ್ಡ ದನಿಯಿಂದ ಗಹಗಹಿಸಿ ನಕ್ಕು, "ಅಡಿಗೆ ಮನೆಯ ಸುವಾಸನೆ ಮಾತ್ರವೇ ಅಲ್ಲ. ರುಚಿ ಕೂಡಾ ಹೇಗಿರುವುದೆಂದು ಈಗಲೇ ನೋಡುವಿಯಂತೆ! ಬಾ. ನನ್ನ ಜತೆಯಲ್ಲೇ ಕುಳಿತುಕೋ. ಗೌರವದ ಅತಿಥಿ ನೀನು!" ಎಂದು ಅವನ ಬೆನ್ನಿಗೆ ಕೈಹಾಕಿ ಅಪ್ಪಿ ಕೊಂಡನು.

ಕಳ್ಳರ ನಾಯಕನು ಭೀಮಶಂಕರನಿಗೆ ತೃಪ್ತಿ ತೀರುವಂತೆ ಭೋಜನ ಮಾಡಿಸಿ, ಅವನಿಗೆ ಹತ್ತು ಚಿನ್ನದ ನಾಣ್ಯಗಳನ್ನು ಕೂಡಾ ಬಹುಮಾನವಾಗಿ ಕೊಟ್ಟನು.





# ನಾಗ ಕಿರೀಟ

ಒಂದಾನೊಂದು ಕಾಲದಲ್ಲಿ ಸ್ವಿಜರ್ಲಾಂಡಿನಲ್ಲಿ ಒಬ್ಬ ರಾಜನಿದ್ದನು. ಆತನಿಗಿದ್ದುದು ಒಬ್ಬಳು ಕುಮಾರಿ ಮಾತ್ರವೇ. ಗಂಡು ಮಗಂದಿರಿರಲಿಲ್ಲ. ಎಷ್ಟು ದೇವರನ್ನು ಬೇಡಿ ಪೂಜಿಸಿದರೂ ಅವನಿಗೆ ಪುತ್ರ ಸಂತಾನವಾಗಲಿಲ್ಲ, ಆದುದರಿಂದ ರಾಜನು ಆ ಕುಮಾರಿಯನ್ನೇ ಕುಮಾರನೆಂದುಕೊಂಡು ಬೇಟೆ ಮುಂತಾದ ವೀರ ವಿದ್ಯೆಗಳನ್ನೂ ಕಲಿಸಿ ಬಹು ಪ್ರೇಮದಿಂದ ಪೋಷಿಸುತ್ತಿದ್ದನು.

ಒಂದು ದಿನ ತಂದೆಯೂ ಮಗಳೂ ಶಿಕಾರಿಗಾಗಿ ಹೋಗುತ್ತಿರುವಾಗ ಒಬ್ಬಳು ಮುದುಕಿ ಒಂದು ಹಾವನ್ನು ಮುದ್ದಿಸುತ್ತಾ ಲಲ್ಲೆಯಾಡಿಸುವುದನ್ನು ರಾಜನು ನೋಡಿದನು. ಅವನ ಕುಮಾರಿ ಅದನ್ನು ನೋಡಿ, " ಛೀ ! ಛೀ ! ಏನಿದು ಅಸಹ್ಯ ! ಎಂಥ ಕೊಳಕು ! " ಎಂದಳು ಜಿಗುಪ್ಸೆಯಿಂದ ಮುಖವನ್ನು ಸಿಂಡರಿಸಿಕೊಂಡು.

ಅದನ್ನು ಕೇಳಿ ಮುದುಕಿಗೆ ಕೆಟ್ಟ ಕೋಪ ಬಂತು. ಅವಳು ರಾಜಕುಮಾರಿಯನ್ನು ಮೇಲಿಂದ ಕೆಳಗಿನ ವರೆಗೆ ಎರಡು ಮೂರು ಬಾರಿ ನೋಡಿ, " ಈ ಪ್ರಾಣಿಯನ್ನು ನೋಡಿ ಅಷ್ಟು ಅಸಹ್ಯಪಡುವ ನೀನು ಇದರ ಹಾಗೆಯೇ ಬದುಕು ! " ಎಂದು ತನ್ನ ಬಲಗೈಯಲ್ಲಿದ್ದ ಕಡ್ಡಿಯಿಂದ ರಾಜಕುಮಾರಿಯನ್ನು ಮುಟ್ಟಿದಳು. ರಾಜನು ಮುದುಕಿಯನ್ನು ತಡೆಯು ವುದಕ್ಕೆ ಮೊದಲೇ ದಾರುಣ ಘಟನೆ ನಡೆದು ಹೋಯಿತು.

ರಾಜಕುಮಾರಿ ಒಮ್ಮೆಗೇ ಕಿರುಚಿ ಹಾವಾಗಿ ಮಾರ್ಪಟ್ಟು, ತಲೆಯೆತ್ತಿ ತಂದೆಯನ್ನು ದೀನದೃಷ್ಟಿ ಯಿಂದ ನೋಡಿದಳು.

ಮುದುಕಿ ಅಷ್ಟಕ್ಕೆ ಸುಮ್ಮನಿರದೆ, " ಇನ್ನು ನಿನಗೆ ಅಪ್ಪನೊಂದಿಗೆ ಏನು ಕೆಲಸ ? ಹಾವಾಗಿಯೇ ಬದುಕು, ನಡೆ ! " ಎಂದು ಹಾವನ್ನು ಮತ್ತೊಮ್ಮೆ ಕಡ್ಡಿಯಿಂದ ಮುಟ್ಟಿದಳು. ಕೂಡಲೇ ಹಾವು ಸರ ಸರನೆ ಅಲ್ಲಿಂದ ಓಡಿಹೋಯಿತು.

ಅದುವರೆಗೆ ಮರಗಟ್ಟಿ ನಿಂತು ನೋಡುತ್ತಿದ್ದ ರಾಜನು, ಕಡೆಗೆ ಕೋಪಾವೇಶದಿಂದ ಹಲ್ಲು ಕಡಿಯುತ್ತಾ ಮುದುಕಿಯನ್ನು ಕತ್ತಿ ಹಿಡಿದು ಕೊಲ್ಲಲು ನೋಡಿದನು.

ಮುದುಕಿ ಸ್ವಲ್ಪವೂ ಹೆದರದೆ, ಕೈಯಲ್ಲಿದ್ದ ಕಡ್ಡಿ ಯನ್ನು ಮೇಲೆತ್ತಿ, " ಬೇಡಾ ! ಎಚ್ಚರಿಕೆ ! ನಿನ್ನ

ಸ್ವಿಜರ್ಲಾಂಡ್ ಜಾನಪದ ಕಥೆ



ಮಗಳಿಗೆ ಬಂದ ಗತಿಯೇ ನಿನಗೂ ಬರುತ್ತೆ! ನೋಡಿಕೋ!" ಎಂದು ಹೆದರಿಸಿದಳು.

ಜುಟ್ಟು ಸಿಕ್ಕದೆ ಹೋಗಿ, ಕಾಲಿಗೆ ಬೀಳುವ ಹಾಗೆ ರಾಜನು ಮುದುಕಿಗೆ ಕೈಮುಗಿದು ದಯೆ ತೋರಿಸುವಂತೆ ನಾನಾಪರಿಯಲ್ಲಿ ಬೇಡಿಕೊಳ್ಳತೊಡಗಿದನು. ಮುದುಕಿ ಸ್ವಲ್ಪ ತಗ್ಗಿದಳು.

"ನನಗೆ ಮಂತ್ರ ಮಾಡುವುದಷ್ಟೇ ಗೊತ್ತಿದೆಯಲ್ಲದೆ, ಮಾಡಿದುದನ್ನು ಬಿಡಿಸಲು ಬಾರದು. ನಾನು ಬೇಕಾದರೆ ನಿನ್ನ ಮಗಳನ್ನು ನಾಗಗಳಿಗೆಲ್ಲ ರಾಣಿಯಾಗುವಂತೆ ಮಾಡುತ್ತೇನೆ. ಆಗ ಅವಳ ಜೀವಿತವು ಇನ್ನೊಂದಿಷ್ಟು ಪ್ರಕಾಶಮಾನವಾಗಿಯೇ ಇರುತ್ತದೆ. ಅವಳಿಗಾಗಿ ಒಂದು ಪುಟ್ಟ ಕಿರೀಟವನ್ನು ಮಾಡಿಸಿ, ಮೂರು ದಿನಗಳಲ್ಲಿ ಇಲ್ಲಿಗೆ ತಂದು ನನಗೆ ಕೊಡು. ಆ ಕಿರೀಟವು ಕರಗಿ ಹೋಗುವವರೆಗೂ ನಿನ್ನ ಮಗಳು ಹಾವಾಗಿದ್ದು ಆಮೇಲೆ ಮಾನವ ರೂಪ ಪಡೆಯುತ್ತಾಳೆ. ಉತ್ತಮವಾದ ಪುತ್ಥಳಿ ಚಿನ್ನದಿಂದಲೇ ಕಿರೀಟ ಮಾಡಿಸು. ಮಿಶ್ರ ಬಂಗಾರವಾದರೆ ನೀರಿನಲ್ಲಿ ಎಂದಿಗೂ ಕರಗುವುದಿಲ್ಲ" ಎಂದಳು ಮಂತ್ರದ ಮುದುಕಿ.

ರಾಜನು ಬೇರೆ ಉಪಾಯ ಕಾಣದೆ ನಿಟ್ಟುಸಿರು ಬಿಟ್ಟು ಅವಳು ಹೇಳಿದಂತೆಯೇ ಪುಟ್ಟ ಕಿರೀಟವನ್ನು ಮಾಡಿಸಿ ಆ ಮುದುಕಿಗೆ ತಂದುಕೊಟ್ಟನು. ಮುದುಕಿ ಅದನ್ನು ಮಂತ್ರಿಸಿ "ಇದು ಅಕ್ಷಯ ಸಂಪತ್ತಿನ ಕಿರೀಟ" ಎನ್ನುತ್ತಾ ತೆಗೆದುಕೊಂಡಳು. ಕಿರೀಟವು ಹಾವಾದ ರಾಜಕುಮಾರಿಯ ತಲೆಗೆ ಸೇರಿತು.

ಆದರೆ ಆ ಕಿರೀಟದ ಮಹತ್ವವು ರಾಣೀವಾಸದಿಂದ ಹೇಗೋ ಹೊರಬಿದ್ದು ಊರವರಿಗೆಲ್ಲಾ ಗೊತ್ತಾಗಿ ಬಣ್ಣವೇರಿಕೊಂಡು ಹರಡಿತು. ಆ ಕಿರೀಟವಿರುವ ಜಾಗದಲ್ಲಿ ದಾರಿದ್ರ್ಯವಿರದೆಂದು, ಧಾನ್ಯದ ಕಣಜದಲ್ಲಿ ಅದನ್ನಿಟ್ಟರೆ ಕಣಜವು ತುಂಬಿಕೊಂಡೇ ಇರುತ್ತದೆಂದು, ಹಣದ ಪೆಟ್ಟಿಗೆಯಲ್ಲಿಟ್ಟರೆ ಹಣವು ಕರಗದೆಂದು, ಅದು ಹಾವಿನ ತಲೆಯ ಕಿರೀಟವೆಂದು ವಿಧವಿಧವಾಗಿ ಸುದ್ದಿ ಹರಡಿ, ಹೇಗಾದರೂ ಆ ಕಿರೀಟವನ್ನು ಸಂಪಾದಿಸಿಕೊಳ್ಳಬೇಕೆಂದು ಅನೇಕರು ಪ್ರಯತ್ನಪಡತೊಡಗಿದರು.

ಒಂದು ದಿನ ಒಬ್ಬ ಬಡ ರೈತನು ಅರಣ್ಯಮಾರ್ಗದಲ್ಲಿ ಪ್ರಯಾಣ ಮಾಡಿಕೊಂಡಿದ್ದಾಗ ಅವನಿಗೆ ತುಂಬಾ ಬಾಯಾರಿಕೆಯಾಯಿತು. ಒಂದು ಕೊಳವನ್ನು ನೋಡಿ ನೀರನ್ನು ಕುಡಿಯಲು ಹೋಗಿ ಕೊಳದ ಬದಿಯಲ್ಲಿ ನಿಂತನು. ನೀರಿನಲ್ಲಿ ದೊಡ್ಡದೊಂದು ಹಾವು ಈಜುತ್ತಿರುವುದು ಕಂಡಿತು. ಕೊಳದ ಬದಿಯಲ್ಲಿ ಪುಟ್ಟದೊಂದು ಕಿರೀಟವು ಜಗಜಗನೆ ಹೊಳೆಯುತ್ತಿರುವುದನ್ನು ನೋಡಿದನು. ಅದು ನಾಗಕಿರೀಟವಾಗಿರಬೇಕೆಂದು ಊಹಿಸಿ ಆ ರೈತನು ಅದನ್ನು ತೆಗೆದುಕೊಂಡು, ನೀರು ಕುಡಿದು ತನ್ನ ದಾರಿ ಹಿಡಿದು ಸಾಗಿದನು. ಬೇಗದಲ್ಲೇ ಆ ದೊಡ್ಡ ಹಾವೂ, ಇತರ ಹಾವುಗಳೂ ತನ್ನ ಹಿಂದೆ

ಬರುವುದನ್ನು ಗಮನಿಸಿ ಆ ರೈತನು, ಥಕ್ಕನೆ ತನ್ನ ಪಕ್ಕದಲ್ಲಿದ್ದ ಒಂದು ಮರದ ಮೇಲೆ ಹಾರಿ ಏರಿದನು.

ಅವನಿಗೆ ಮರದಿಂದ ಕೆಳಗಿಳಿಯದಂತೆ ಹಾವುಗಳು ಮರವನ್ನು ಸುತ್ತಿಕೊಂಡು ಭುಸುಗುಟ್ಟುತ್ತ ಅತ್ತಲೂ ಇತ್ತಲೂ ತಿರುಗಿಕೊಂಡಿದ್ದುವು.

ಅಷ್ಟರಲ್ಲಿ ಯಾವಳೋ ಸ್ತ್ರೀಯೊಬ್ಬಳು ಆ ಕಡೆಗೆ ಬಂದು ಅವನನ್ನು ನೋಡಿ, "ಏಕೆ ಮರವೇರಿದೆಯಪ್ಪಾ ?" ಎಂದು ಕೇಳಿದಳು.

ಅವನು ನಡೆದ ಸಮಾಚಾರವನ್ನೆಲ್ಲಾ ಅವಳೊಂದಿಗೆ ಹೇಳಿ, "ನಿನ್ನನ್ನು ಈ ಹಾವುಗಳು ಏನೂ ಮಾಡದೆ ಹೋಗಲು ಕಾರಣವೇನು ?" ಎಂದು ಕೇಳಿದನು.

"ನನಗೆ ಹಾವು ಮಂತ್ರ ಗೊತ್ತಿದೆ. ಹಾವುಗಳು ನನಗೆ ಏನೂ ಮಾಡುವುದಿಲ್ಲ. ನನಗೆ ನಿನ್ನ ಹತ್ತಿರ ಇರುವ ನಾಗಕಿರೀಟ ಕೊಟ್ಟರೆ ಈ ಹಾವುಗಳನ್ನೆಲ್ಲಾ ಕಳುಹಿಸಿಬಿಡುತ್ತೇನೆ. ನಿನ್ನ ಜೀವವೂ ಉಳಿಯುತ್ತದೆ" ಎಂದಳು ಅವಳು.

"ಆ ಸಂಗತಿ ಆಮೇಲೆ ನೋಡೋಣ. ಮೊದಲು ಹಾವುಗಳನ್ನೆಲ್ಲಾ ಕಳುಹಿಸಿಬಿಡು" ಎಂದನು ರೈತ.

ಆ ಹೆಂಗಸು ಏನೋ ಮಂತ್ರೋಚ್ಚಾರ ಮಾಡಿದಳು. ಹಾವುಗಳೆಲ್ಲಾ ಹೊರಟುಹೋದವು. ಆಮೇಲೆ ರೈತನು ಮರದ ಮೇಲಿನಿಂದ ಕೆಳಗೆ ಬಂದು "ನಾನು ಸಂಸಾರದ ಭಾರ ಹೊರುವವನು. ನನಗೆ ಈ ಕಿರೀಟವು ಬಹಳ ಉಪಯೋಗವಾಗುತ್ತದೆ. ಬೇಕಾದರೆ ನೀನು ಕೂಡಾ ನಿನ್ನವರೊಂದಿಗೆ ನನ್ನ ಮನೆಯಲ್ಲೇ ಇರಬಹುದು. ನಿನಗೆ ಯಾವ ಕೊರತೆಯೂ ಬಾರದಂತೆ ನೋಡಿಕೊಳ್ಳುತ್ತೇನೆ" ಎಂದನು.

ವಿಧಿಯಿಲ್ಲದೆ ಅವಳು ಅದಕ್ಕೆ ಒಪ್ಪಬೇಕಾಯಿತು. ಅವಳು ಯಾರೂ ಇಲ್ಲದ ಒಬ್ಬಂಟಿಯಾದವಳೇ.

ರೈತನು ನಾಗಕಿರೀಟವನ್ನು ಬುದ್ಧಿವಂತಿಕೆಯಿಂದ ಉಪಯೋಗಿಸುತ್ತ ಧನಧಾನ್ಯಗಳ ಅಭಿವೃದ್ಧಿ ಪಡೆದು ಬಹಳ ಕಾಲ ಸುಖವಾಗಿದ್ದನು. ಆ ಹೆಂಗುಸಿಗೆ ನಾಗಕಿರೀಟವು ಎಲ್ಲಿರುವುದೆಂದು ತಿಳಿಯದಂತೆ



ಅವನು ಜಾಗರೂಕನಾಗಿದ್ದನು. ಆದರೂ ಒಂದು ದಿನ ಅವಳು ಅದರ ರಹಸ್ಯವನ್ನು ಕಂಡುಹಿಡಿದು, ರೈತನು ಇಲ್ಲದಾಗ ಅದನ್ನು ತೆಗೆದುಕೊಂಡು ತನ್ನ ಮನೆಗೆ ಓಡಿಹೋದಳು. ಅವಳ ಮನೆ ಎಲ್ಲಿದೆಯೆಂದು ರೈತನಿಗೆ ತಿಳಿಯದು.

ಈಗ ಅದೃಷ್ಟವು ಆ ಹೆಂಗುಸಿಗೆ ಹಿಡಿಯಿತು. ಅವಳು ಆ ಕಿರೀಟವನ್ನು ತನ್ನ ಧಾನ್ಯದ ಕಣಜದಲ್ಲಿಟ್ಟು ಹೇರಳ ಧಾನ್ಯ ಮಾರಿ ತುಂಬಾ ಹಣ ಗಳಿಸಿದಳು.

ಆದರೆ ಒಂದು ದಿನ ಅವಳು ಧಾನ್ಯವನ್ನು ಹಿಟ್ಟು ಮಾಡಿಸಲು ಕಳುಹಿಸುವಾಗ ಆ ಪುಟ್ಟ ಕಿರೀಟ ಧಾನ್ಯದೊಂದಿಗೆ ಸೇರಿ ಬೀಸುವ ಕಲ್ಲಿನ ಯಂತ್ರದೊಳಗೆ ಹೋಯಿತು.

ಯಂತ್ರದ ಯಜಮಾನನು ಬೀಸುವ ಕಲ್ಲಿನ ಯಂತ್ರಕ್ಕೆ ಧಾನ್ಯ ಹಾಕಿ, ಎಷ್ಟು ಹೊತ್ತು ತಿರುಗಿಸಿದರೂ ಹಿಟ್ಟು ಒಂದೇ ಸಮನೆ ಸುರಿಯುತ್ತಲೇ ಇತ್ತು. ಹಿಟ್ಟಿನ ರಾಶಿಯನ್ನು ನೋಡಿ ಹೆದರಿ ಯಂತ್ರದ ಒಡೆಯನು ಇದೇನು ವಿಪರೀತವಪ್ಪಾ ಎಂದುಕೊಂಡು ತಿರುಗಣೆ ಕಲ್ಲಿಗೆ ಸೇರಿದ ಧಾನ್ಯದ ತೊಟ್ಟಿಯಲ್ಲಿ ಹುಡುಕುವಾಗ ನಾಗಕಿರೀಟವು ಅವನ ಕೈಗೆ ಸಿಕ್ಕಿತು. ಅವನು ಅದನ್ನು ಒಯ್ದು ತನ್ನ ಹಣದ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟನು. ಅಷ್ಟರಲ್ಲಿ ಆ ಹೆಂಗುಸು ಬಂದು ತನ್ನದೊಂದು ನಗವು ಧಾನ್ಯದೊಂದಿಗೆ ಇಲ್ಲಿಗೆ ಬಂದಿತೆಂದು ತಗಾದೆ ತೆಗೆದಳು. ಯಂತ್ರದ ಯಜಮಾನ ತನಗೇನೂ ತಿಳಿಯದೆಂದನು. ಹೆಂಗುಸು ಅಲ್ಲೆಲ್ಲಾ ಹುಡುಕಿ, ಅದು ದೊರಕದೆ ನಿರಾಶಳಾಗಿ ಹೊರಟುಹೋದಳು.

ಹಿಟ್ಟಿನ ಯಂತ್ರದ ಒಡೆಯನಿಗೆ ದೊಡ್ಡದೊಂದು ಆಲೋಚನೆ ಬಂತು. ನಾಗಕಿರೀಟವನ್ನು ಧಾನ್ಯದ ರಾಶಿಯಲ್ಲೇ ಇಟ್ಟರೆ, ಸ್ವಲ್ಪವೇ ಧಾನ್ಯಗಳನ್ನು ವರ್ಷಗಟ್ಟಲೆ ಅಡಿಸಿ ಹಿಟ್ಟುಮಾಡಿ ಮಾರುತ್ತ ಅಪಾರ ಧನಗಳಿಸಬಹುದಷ್ಟೆ ? ಹಾಗೆಯೇ ಅವನು ಸ್ವಲ್ಪಕಾಲದವರೆಗೆ ಹೇರಳ ಧನ ಗಳಿಸಿದನು. ಆದರೆ ಒಂದು ದಿನ ಆಗಬಾರದ್ದು ಆಗಿಹೋಯಿತು. ಧಾನ್ಯದೊಂದಿಗೆ ನಾಗಕಿರೀಟವೂ ಒಂದು ದಿನ ತಿರುಗಣೆ ಕಲ್ಲಿನ ಅಡಿಗೆ ಸಿಕ್ಕಿ, ಪುಡಿಪುಡಿಯಾಗಿ ಹೋಯಿತು.

ಆಮೇಲೆ ತಿರುಗಣೆ ಕಲ್ಲಿನಿಂದ ಹಿಟ್ಟು ಬೀಳುವುದೇ ನಿಂತುಹೋಯಿತು.

ನಾಗಕಿರೀಟವು ನಿರ್ಮೂಲವಾದ ಆ ಕ್ಷಣದಲ್ಲಿಯೇ ನಾಗರಾಣಿಯಾಗಿ ಜೀವಿಸಿಕೊಂಡಿದ್ದ ರಾಜಕುಮಾರಿಗೆ ಮೊದಲಿನ ರೂಪ ಬಂದಿತು. ಅವಳು ಬೇಗಬೇಗನೆ ತನ್ನ ತಂದೆಯ ಬಳಿಗೆ ಹೋಗಿ ಎಲ್ಲರನ್ನೂ ಸಂತೋಷಪಡಿಸಿದಳು. ತಕ್ಕ ವರನನ್ನು ಮದುವೆ ಮಾಡಿಕೊಂಡು ಸುಖವಾಗಿದ್ದಳು.





# ಶಿವಪುರಾಣ

ದಿವೋದಾಸನ ಬಳಿಗೆ ಹೋದ ಬ್ರಹ್ಮನು ಕೂಡಾ ಹಿಂದಿರುಗಿ ಬಾರದಿರುವುದನ್ನು ನೋಡಿ ಶಿವನು ಪ್ರಮಥ ಗಣಗಳನ್ನು ಕಾಶಿಗೆ ಕಳುಹಿಸಿದನು. ಕಾಶೀ ಕ್ಷೇತ್ರದ ಮಹತ್ವದಲ್ಲಿ ಅದೇನು ವಿಶೇಷವೋ! ಪ್ರಮಥರು ಕಾಶೀಕ್ಷೇತ್ರವನ್ನು ಸೇರಿದ ಕೂಡಲೇ ಬಂದ ಕಾರ್ಯವನ್ನು ಪೂರ್ತಿ ಮರೆತುಬಿಟ್ಟರು. ಅವರಲ್ಲಿ ಕಪರ್ದಿ ಎಂಬವನು ಕಪರ್ದೀಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದನು,

ಮಂದರಗಿರಿಯ ಮೇಲಿರುವ ಶಿವನಿಗೆ ಕಾಶಿಯಲ್ಲಿ ಏನು ನಡೆಯುತ್ತಿದೆ ಎಂಬುದೊಂದೂ ತಿಳಿಯಲಿಲ್ಲ. ಆಗ ಶಿವನು ವಿನಾಯಕನನ್ನು ಕರೆದು, ಅವನಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ ಕಾಶೀ ನಗರಕ್ಕೆ ಕಳುಹಿಸಿಕೊಟ್ಟನು.

ವಿನಾಯಕನು ಕಾಶೀ ನಗರಕ್ಕೆ ಹೋಗಿ ಅಲ್ಲಿ ಅನೇಕ ಉತ್ಪಾತಗಳಾಗುವಂತೆ ಮಾಡಿದನು. ಆಮೇಲೆ ವಿನಾಯಕನು ದಿವೋದಾಸನ ಭವನದೊಳಗೆ ಪ್ರವೇಶ ಮಾಡಿದನು. ರಾಜನು ಅವನೊಂದಿಗೆ ಅನೇಕ ಪ್ರಶ್ನೆಗಳನ್ನು ಕೇಳಿದನು. ಎಲ್ಲವಕ್ಕೂ ವಿನಾಯಕನು ಸರಿಯಾದ ಉತ್ತರ ಕೊಟ್ಟನು. ಹೀಗಾಗಿ ವಿನಾಯಕನು ರಾಜಪುರೋಹಿತರಲ್ಲಿ ಒಬ್ಬನಾಗಿ ಸೇರಿ ಹೋದನು.

ಒಂದು ದಿನ ರಾಜನು ಢುಂಢಿ ಭಟ್ಟಾರಕನೊಂದಿಗೆ, "ಕಾಶೀ ನಗರದಲ್ಲಿ ಹೀಗೆ ಉತ್ಪಾತಗಳಾಗಲು ಕಾರಣವೇನು ?" ಎಂದು ಕೇಳಿದನು.

"ರಾಜಾ, ಸ್ವಲ್ಪಕಾಲದವರೆಗೆ ನೀನು ಕಾಶೀ ನಗರವನ್ನು ಬಿಟ್ಟು ದೂರ ಹೋಗಿರುವುದು ಒಳ್ಳೆಯದೆಂದು ನನಗೆ ಅನಿಸುತ್ತದೆ. ಇನ್ನು ಹದಿನೆಂಟು ದಿನಗಳಲ್ಲಿ ಉತ್ತರ ದೇಶದಿಂದ ಒಬ್ಬ ಬ್ರಾಹ್ಮಣನು ಬರುತ್ತಾನೆ. ಅವನೇ ನಿನಗೆ ತಕ್ಕುದಾದ ಹಿತೋಪದೇಶ ಕೂಡಾ ಮಾಡುತ್ತಾನೆ" ಎಂದನು ಢುಂಢಿ.

ತರುವಾಯ ಶಿವನು ವಿಷ್ಣುಮೂರ್ತಿಯನ್ನು ಕಾಶೀ ನಗರಕ್ಕೆ ಕಳುಹಿಸಿದನು. ವಿಷ್ಣು ಬುದ್ಧನ ರೂಪದಲ್ಲಿ ಬಂದು ಕಾಶಿಯ ಪೌರರಿಗೆ ನಾಸ್ತಿಕ ಮತವನ್ನೂ ಬೌದ್ಧ, ಜೈನ ಧರ್ಮಗಳನ್ನೂ

## ೧೫. ಕಾಶೀಕ್ಷೇತ್ರದಲ್ಲಿ ವ್ಯಾಸ



ಬೋಧಿಸಿ, ಅವರ ಧರ್ಮಚಿಂತನೆಯನ್ನು ತೊಲಗಿಸಿದನು. ಆಮೇಲೆ ವಿಷ್ಣು ಬ್ರಾಹ್ಮಣ ವೇಷಧರಿಸಿ ದಿವೋದಾಸನ ಬಳಿಗೆ ಹೋಗಿ ಅವನನ್ನು ಆಶೀರ್ವಾದ ಮಾಡಿದನು.

ದಿವೋದಾಸನು ಆ ಬ್ರಾಹ್ಮಣನೊಂದಿಗೆ, "ಅಯ್ಯಾ, ದೇವತೆಗಳು ನನ್ನನ್ನು ಬಗೆ ಬಗೆಯಾಗಿ ಪೀಡಿಸುತ್ತಿದ್ದಾರೆ. ಸಾಕಾಗಿ ಹೋಯಿತು. ನಾನು ಕೂಡಾ ಬಹಳ ಕಾಲದಿಂದ ರಾಜ್ಯಭಾರ ನಡೆಸುತ್ತ ಮುದುಕನಾಗಿ ಹೋಗಿದ್ದೇನೆ. ನನಗೆ ಮೋಕ್ಷವು ಹೇಗೆ ಬರುತ್ತದೆ ? ನಿಮಗೆ ಗೊತ್ತಿದ್ದರೆ ಹೇಳಬೇಕು" ಎಂದು ಕೇಳಿಕೊಂಡನು.

"ರಾಜಾ, ಕಾಶೀ ನಗರದಲ್ಲಿ ಲಿಂಗ ಪ್ರತಿಷ್ಠೆ ಮಾಡು. ಆ ಪುಣ್ಯ ಕಾರ್ಯದ ಪ್ರಭಾವದಿಂದ ನೀನು ಶರೀರದೊಂದಿಗೆ ಕೈಲಾಸಕ್ಕೆ ಹೋಗಿ ಸೇರುವಿ" ಎಂದನು ಬ್ರಾಹ್ಮಣ ರೂಪದ ವಿಷ್ಣು. ಅದರಂತೆ ದಿವೋದಾಸನು ತನ್ನ ಕುಮಾರನಾದ ಸಮರಂಜಯನಿಗೆ ಪಟ್ಟಗಟ್ಟಿ, ದೊಡ್ಡದೊಂದು ಗುಡಿಯನ್ನು ಕಟ್ಟಿಸಿದನು. ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಮುಗಿಸಿದನು. ಆಮೇಲೆ ತನಗಾಗಿ ಬಂದ ದೇವಲೋಕದ ವಿಮಾನದಲ್ಲಿ ಏರಿಕೊಂಡು ಮರ್ತ್ಯ ಶರೀರದೊಂದಿಗೇ ಕೈಲಾಸಕ್ಕೆ ಹೋಗಿ ಸೇರಿದನು. ಕಾಶಿಯನ್ನು ಬಿಟ್ಟುಹೋದ ದೇವತೆಗಳೆಲ್ಲರೂ ಮತ್ತೆ ಬಂದು ಸೇರಿದರು. ಶಿವನು ನಂದಿ ವಾಹನದ ಮೇಲೆ ತನ್ನ ಗಣಗಳ ಪರಿವಾರದೊಂದಿಗೆ ಕಾಶೀ ನಗರಕ್ಕೆ ಬಂದು ಸೇರಿಕೊಂಡು ಪರಮ ತೃಪ್ತನಾದನು.

ವಿಶ್ವನಾಥ ವಿಶಾಲಾಕ್ಷಿಯರು ಒಂದಾಗಿ ಸೇರಿಕೊಂಡಿರುವ ಕಾಶೀ ನಗರದಲ್ಲಿ ಸ್ವಲ್ಪಕಾಲ ವಾಸ ಮಾಡಬೇಕೆಂಬ ಕೋರಿಕೆಯಿಂದ ವೇದವ್ಯಾಸನು ತನ್ನ ಶಿಷ್ಯ ಗಣಗಳೊಂದಿಗೆ ಕೂಡಿ ಕಾಶಿಗೆ ಬಂದನು.

ಆ ಮಹಾನುಭಾವನ ಶಿಷ್ಯರಲ್ಲಿ ವೈಶಂಪಾಯನ, ಜೈಮಿನಿ, ಪೈಲ, ಸುಮಂತ ಮೊದಲಾದ ಮಹಾಮಹಿಮೆಗಳುಳ್ಳ ಅನೇಕರಿದ್ದರು.

ಅವರು ಉದಯ ಕಾಲದಲ್ಲಿ ತಮ್ಮ ಕಾಲಕೃತ್ಯಗಳನ್ನು ತೀರಿಸಿಕೊಂಡು, ಗಂಗೆಯಲ್ಲಿ ಸ್ನಾನಮಾಡಿ, ಗಾಯತ್ರಿ ಜಪಿಸಿ, ಅಗ್ನಿಕಾರ್ಯ ತೀರಿಸಿದ ಮೇಲೆ ಊರೊಳಗೆ ಭಿಕ್ಷಾಟನೆ ಮಾಡಲು ಒಬ್ಬೊಬ್ಬರು ಒಂದೊಂದು ದಾರಿ ಹಿಡಿದು ಹೊರಟರು.

ಆ ಸಮಯದಲ್ಲಿ ವಿಶ್ವೇಶ್ವರನು ವಿಶಾಲಾಕ್ಷಿಯೊಂದಿಗೆ, "ವ್ಯಾಸನ ಮನಸ್ಸು ಹೇಗಿರುವುದೆಂದು ನೋಡೋಣ. ಅವನಿಗೂ, ಅವನ ಶಿಷ್ಯರಿಗೂ ಭಿಕ್ಷೆ ಸಿಗದ ಹಾಗೆ ಮಾಡಿಬಿಡು" ಎಂದನು.

ಅದರಂತೆ ವಿಶಾಲಾಕ್ಷಿ ಕಾಶೀ ನಗರದ ಗೃಹಿಣಿಯರಿಗೆಲ್ಲಾ ಭಿಕ್ಷೆ ನೀಡುವ ಬುದ್ಧಿ ಬಾರದಂತೆ ಮಾಡಿದಳು. ವ್ಯಾಸನು "ಭಿಕ್ಷಾಂದೇಹಿ" ಎಂದು ಮನೆ ಮನೆಗಳಿಗೆ ತಿರುಗುತ್ತಿರಲು, ಗೃಹಿಣಿಯರು, "ಇನ್ನೂ ಅಡಿಗೆಯಾಗಿಲ್ಲವಪ್ಪಾ", "ಸಾಮಾನು



ಬರಲಿಲ್ಲ", "ಆಮೇಲೆ ಬಾ", "ಮುಂದಕ್ಕೆ ಹೋಗು". "ಈ ದಿನ ನಮ್ಮಲ್ಲಿ ಆಬ್ದಿಕ" ಎಂದು ಹೇಳತೊಡಗಿದರು.

ವ್ಯಾಸನಿಗೆ ಆದ ಅನುಭವವೇ ಅವನ ಶಿಷ್ಯರಿಗೂ ಆಯಿತು. ಹೊತ್ತು ಮಾಲುವವರೆಗೂ ಊರೆಲ್ಲಾ ತಿರುಗಿ ತಿರುಗಿ ಹಸಿವೆಯ ಹೊಟ್ಟೆಯಲ್ಲೇ ಎಲ್ಲರೂ ಮಠಕ್ಕೆ ಹಿಂದಿರುಗಿದರು.

"ನನಗೆ ಎಲ್ಲಿಯೂ ಒಂದಗಳು ಸಿಗಲಿಲ್ಲ. ನಿಮಗೇನಾದರೂ ಭಿಕ್ಷೆ ದೊರಕಿತೇನು ?" ಎಂದು ವ್ಯಾಸನು ತನ್ನ ಶಿಷ್ಯರನ್ನು ಕೇಳಿದನು. ಅವರೆಲ್ಲರೂ ದೊರೆಯಲಿಲ್ಲವೆಂದರು.

"ಬೆಳಗ್ಗೆ ಎದ್ದು ಯಾವ ಪಾಪಾತ್ಮನ ಮುಖ ನೋಡಿದೆವೋ !" ಎಂದನು ವ್ಯಾಸ.

ಹೀಗೆಯೇ ಒಂದೆರಡಲ್ಲ, ಏಳು ದಿನಗಳವರೆಗೆ ನಡೆಯಿತು. ಹಸಿವೆ ತಡೆದುಕೊಳ್ಳುವ ಅಭ್ಯಾಸ ವಿದ್ದರಾದರೂ, ಅದಕ್ಕೊಂದು ಮಿತಿಯಿದೆಯಷ್ಟೆ ?

ಎಂಟನೇ ದಿನ ಬೆಳಗಾಯಿತು. ಮತ್ತೆ ನಿತ್ಯ ಕರ್ಮಗಳನ್ನು ತೀರಿಸಿಕೊಂಡು, ಕಾಶಿಯೊಳಗಿರುವ ಎಲ್ಲಾ ದೇವತೆಗಳಿಗೂ ಮನಸ್ಸಿನಲ್ಲೇ ವಂದನೆಮಾಡಿ, ವ್ಯಾಸನೂ ಅವನ ಶಿಷ್ಯರೂ ತಲಾ ಒಂದೊಂದು ದಾರಿಯಲ್ಲಿ ಭಿಕ್ಷಾಟನೆಗೆ ಹೊರಟರು.

ವ್ಯಾಸನಿಗೆ ಒಂದು ಮನೆಯಲ್ಲೂ ಭಿಕ್ಷೆ ದೊರಕಲಿಲ್ಲ. ಆಗ ಅವನಿಗೆ ತಾಳಲಾಗದಷ್ಟು ಕೋಪಾವೇಶ ಉಕ್ಕಿಕೊಂಡು ಬಂತು. ಹಣೆಯ ಮೇಲೆ ಬೆವರು ಒಸರಿತು. ಕೈಕಾಲುಗಳು ನಡುಗಿದುವು. ಅವನು ನಡುಬೀದಿಯಲ್ಲಿ ಭಿಕ್ಷಾಪಾತ್ರವನ್ನು ನೆಲಕ್ಕೆ ಅಪ್ಪಳಿಸಿ ಒಡೆದುಹಾಕಿ, ಕಾಶಿಯಲ್ಲಿ ಮೂರು ತಲೆಮಾರುಗಳವರೆಗೆ ವಿದ್ಯೆಯೂ, ಧನವೂ, ಭಕ್ತಿಯೂ ಇಲ್ಲದೆ ಹೋಗಲೆಂದು ಶಾಪ ಕೊಡಲಿಕ್ಕಾಗಿ ಕಮಂಡಲುವಿನ ಜಲವನ್ನು ಅಂಗೈಗೆ ಬಗ್ಗಿಸಿಕೊಳ್ಳಲು ನೋಡುವಾಗ, ಅದೇನು ವಿಚಿತ್ರವೋ, ನಡುಗುವ ಕೈ ಮೇಲಕ್ಕೆ ಏಳಲೇ ಇಲ್ಲ.

ಅಷ್ಟರಲ್ಲಿ ಆ ಬೀದಿಯಲ್ಲಿರುವ ಒಂದು ಮನೆಯ ಬಾಗಿಲು ತೆರೆದುಕೊಂಡು ಐವತ್ತು ವಯಸ್ಸಿನ ಸ್ತ್ರೀಯೊಬ್ಬಳು ಸರ್ವಾಭರಣಭೂಷಿತೆಯಾಗಿ ಹೊರಗೆ ಬಂದು, ವ್ಯಾಸನನ್ನು ನೋಡಿ, "ಅಯ್ಯಾ, ಬ್ರಾಹ್ಮಣಾ ! ಶಾಂತನಾಗು ! ಶಾಪ ಬೇಡ ! ಸ್ವಲ್ಪ ಇಲ್ಲಿಗೆ ಬಾ !" ಎಂದು ಕರೆದಳು ಶಾಂತ ಸ್ವರದಿಂದ.

ವ್ಯಾಸನು ಮಹದಾನಂದದಿಂದ, ಆ ಸ್ತ್ರೀ ಯಾರು, ಯಾವ ಕುಲ ಎಂಬುದೊಂದೂ ತಿಳಿದುಕೊಳ್ಳದೆಯೇ ಅವಳಿಗೆ ನಮಸ್ಕಾರ ಮಾಡಿದನು. ಆಗ ಅವನ ಕೈ ಜೋಡಿಕೊಂಡಿತು. ಅವನು ಹತ್ತಿರ ಹೋದ ಕೂಡಲೇ ಅವಳು, "ಅಲ್ಪ ಭಿಕ್ಷೆ ದೊರಕದಿರುವ ಮಾತ್ರಕ್ಕೆ ಕಾಶೀ ನಗರಕ್ಕೆ ಶಾಪ ಕೊಡುವಿಯಾ ? ನಿನ್ನ ಮನಶ್ಶುದ್ಧಿ ಎಷ್ಟರಮಟ್ಟಿನದೆಂದು ತಿಳಿಯಲಿಕ್ಕಾಗಿ ವಿಶ್ವನಾಥನು ಹೀಗೆ ಮಾಡಿದನೇ



ಹೊರತು ಕಾಶೀ ನಗರದಲ್ಲಿ ಹೊಟ್ಟೆಗೆ ಕಷ್ಟ ಬರುವು ದುಂಟೆ? ಮಧ್ಯಾಹ್ನದ ಅತಿಥಿ ವೇಳೆ ಯಾವಾಗ ಬರುವುದೋ ಎಂದು ಅನ್ನಪೂರ್ಣಾದೇವಿ ಅಭ್ಯಾಗತ ರಿಗೆ ಬಂಗಾರದ ಸೌಟಿನಿಂದ ಅಮೃತಪಾಯಸ ಬಡಿಸುವಳೆಂದು ನೀನು ಕೇಳಲಿಲ್ಲವೇನು? ಏಳು ದಿನ ಉಪವಾಸವಿದ್ದ ಮಾತ್ರಕ್ಕೆ ಧೀರತ್ವವನ್ನು ಕಳೆದು ಕೊಂಡು ಶಿವನ ಎರಡನೇ ಪತ್ನಿಯಂತಹ ಕಾಶಿ ಯನ್ನು ಸರ್ವನಾಶ ಮಾಡಲು ನೋಡುವಿಯಲ್ಲಾ! ಹಸಿವೆಯೆಂಬುದು ಎಂತಹ ಘೋರವನ್ನಾದರೂ ಮಾಡಿಸುತ್ತದೆಂಬ ಮಾತು ನಿರೂಪಿಸಿಬಿಟ್ಟೆ! ಭಿಕ್ಷೆ ಹಾಕುತ್ತೇನೆ ಬಾ" ಎಂದಳು.

ಆ ಮಾತು ಕೇಳಿ ವ್ಯಾಸನು, "ಅಮ್ಮಾ, ಇಷ್ಟು ದಿನಗಳ ಮೇಲೆ ಎಂತಹ ಸವಿನುಡಿಗಳನ್ನು ಕಿವಿಗೆ ಹಾಕಿದಿ! ಭಿಕ್ಷೆಗೆ ನನ್ನೊಬ್ಬನನ್ನೇ ಕರೆಯುವೆಯಾ, ಅಲ್ಲ ಹಸಿವೆಯಲ್ಲಿರುವ ನನ್ನ ಶಿಷ್ಯರನ್ನು ಕೂಡಾ ಕರೆದುಕೊಂಡು ಬಾ ಅನ್ನುವಿಯಾ? ಎಲ್ಲರದೂ ಪ್ರಾಣಗಳು ತಾನೇ? ನಮ್ಮೆಲ್ಲರಿಗೂ ನೀನು ನಿನಗೆ ತೋರುವ ಭಿಕ್ಷೆ ನೀಡಿದರೆ ಎಲ್ಲರೂ ಹಂಚಿಕೊಳ್ಳು ತ್ತೇವಮ್ಮಾ" ಎಂದನು.

ಆ ಮಾತು ಕೇಳಿ ಅವಳು ಮುಗುಳು ನಗುವಿ ನೊಂದಿಗೆ, "ಅಪ್ಪಾ, ನೀವುಗಳೆಲ್ಲಾ ಮಧ್ಯಾಹ್ನದ ಪೂಜೆಗಳನ್ನು ಗಂಗಾ ತೀರದಲ್ಲಿ ಮುಗಿಸಿ ಎಲ್ಲರೂ ಸೇರಿಯೇ ಬನ್ನಿರಿ. ಎಲ್ಲರಿಗೂ ಭೋಜನ ಬಡಿಸು ವೆನು" ಎಂದಳು.

ವ್ಯಾಸನು ಅಲ್ಲಿಂದ ಹಿಂದಿರುಗಿ ತನ್ನ ಮುನ್ನೂರು ಮಂದಿ ಶಿಷ್ಯರೊಂದಿಗೆ ಗಂಗೆಗೆ ಹೋಗಿ, ಮಾಧ್ಯಾಹ್ನಿಕ ಗಳನ್ನು ಮುಗಿಸಿಕೊಂಡು ಆ ಮನೆಗೆ ಬಂದು ಸೇರಿದನು. ಆ ಹೆಂಗುಸು ಅವರನ್ನೆಲ್ಲಾ ಕರೆದೊಯ್ದು ಭೋಜನ ಶಾಲೆಯಲ್ಲಿ ಪೀಠಗಳ ಮೇಲೆ ಕುಳ್ಳಿರಿಸಿ ದಳು. ಎಲ್ಲರ ಮುಂದೆ ದೊಡ್ಡ ದೊಡ್ಡ ಬಾಳೆ ಯೆಲೆಗಳನ್ನು ಹಾಕಿದಳು. ವೃದ್ಧಳು ಎಲ್ಲರಿಗೂ ಅಕ್ಷತೆ ತಳಿದು ಧೂಪಾರತಿ ಎತ್ತಿ ಪಂಕ್ತಿಗಳ ನಡುವಿ ನಲ್ಲಿ ನಿಂತು, "ಅಪ್ಪಗಳಿರಾ, ಎಲ್ಲರೂ ಆಪೋಶನ ತೆಗೆದುಕೊಂಡು ಸಾವಕಾಶವಾಗಿ ಭೋಜನ ಮಾಡ ಬೇಕು. ಕಾಶೀ ವಿಶ್ವನಾಥನಿಗೆ ಪ್ರೀತಿಯಾಗುವಂತೆ ಮಾಡಿರಿ!" ಎಂದು ಕೈ ಮುಗಿದಳು.

ವ್ಯಾಸನೂ, ಅವನ ಶಿಷ್ಯರೂ ಒಬ್ಬರ ಮುಖವ ನ್ನೊಬ್ಬರು ನೋಡಿಕೊಂಡರು. ಬಾಳೆಯೆಲೆಯಲ್ಲಿ ಯಾವ ಪದಾರ್ಥಗಳೂ ಕಾಣಲಿಲ್ಲ. ಕಡೇ ಪಕ್ಷ ಅಡಿಗೆಯ ವಾಸನೆಯೇ ಸುಳಿಯಲಿಲ್ಲ.

"ಈ ಮುದಿ ಹೆಂಗುಸು ಸುಳ್ಳಿನ ಊಟ ಬಡಿಸು ವಳು. ಈ ದಿನ ಕೂಡಾ ನಮಗೆ ಉಪವಾಸವೇ! ಇದೊಂದು ವಿಚಿತ್ರ ಉಪವಾಸ!" ಎಂದು ಅವರೆಲ್ಲ ಆಡುಕೊಂಡರು.

ಅವರು ಹೀಗೆ ಆಡುಕೊಳ್ಳುತ್ತಿರುವಾಗಲೇ ಸ್ತ್ರೀಯರು ಬಂದು ಎಲ್ಲರಿಗೂ ಆಪೋಶನಕ್ಕೆ ತೀರ್ಥ ಕೊಡತೊಡಗಿದರು.

"ಅಪ್ಪಗಳಿರಾ ! ಬಹಳ ಹೊತ್ತಾಗಿ ಹೋಯಿತು. ಇನ್ನು ಭೋಜನಕ್ಕೆ ಉಪಕ್ರಮಿಸಿರಿ" ಎಂದಳು ವೃದ್ಧಸ್ತ್ರೀ ಎಲ್ಲರನ್ನೂ ನೋಡಿ.

ಅವರೆಲ್ಲ ಆಪೋಶನದ ತೀರ್ಥ ಕುಡಿದ ಮರು ಕ್ಷಣದಲ್ಲಿ ಎಲ್ಲರ ಎಲೆಗಳಲ್ಲಿಯೂ ಪಂಚಭಕ್ಷ್ಯ ಪರಮಾನ್ನಗಳು ಗಮಗಮಿಸಿಕೊಂಡು ಪ್ರತ್ಯಕ್ಷವಾಗಿದ್ದುವು. ಯಾರು ಯಾರಿಗೆ ಯಾವ ಯಾವ ಪದಾರ್ಥಗಳು ಇಷ್ಟವೋ ಅವೆಲ್ಲಾ ಅವರವರ ಎಲೆಗಳಲ್ಲಿದ್ದುವು.

"ಈ ವೃದ್ಧ ಸ್ತ್ರೀ ಸಾಕ್ಷಾತ್ ಅನ್ನಪೂರ್ಣಾ ದೇವಿಯೇ ಆಗಿರಬೇಕು" ಎಂದುಕೊಂಡು ಎಲ್ಲರೂ ಆನಂದದಿಂದ ಭೋಜನ ಮಾಡಿದರು.

ಎಲ್ಲರ ಭೋಜನವಾಗಿ ಎದ್ದು ಕೈ ತೊಳೆದ ಮೇಲೆ ವೃದ್ಧ ಸ್ತ್ರೀ ಅವರೆಲ್ಲರಿಗೂ ವಿಶ್ರಾಂತಿ ತೆಗೆದುಕೊಳ್ಳುವ ಜಾಗವನ್ನು ತೋರಿಸಿದಳು.

ಸ್ವಲ್ಪಹೊತ್ತಿನ ಮೇಲೆ ವಿಶ್ವನಾಥನು ಪಾರ್ವತೀ ಸಮೇತನಾಗಿ ವ್ಯಾಸನು ತನ್ನ ಶಿಷ್ಯರೊಂದಿಗೆ ವಿಶ್ರಮಿಸಿರುವಲ್ಲಿಗೆ ಬಂದನು. ಪಾರ್ವತಿಯ ಮುಖವು ಬಹಳ ಪ್ರಶಾಂತವಾಗಿದ್ದಿತು.

ಆದರೆ ಶಿವನ ಮುಖದಲ್ಲಿ ಕೋಪವು ತಾಂಡವಿಸಿಕೊಂಡಿರುವಂತೆ ಕಂಡಿತು. ಪರಿಣಾಮ ಏನಾಗುವುದೋ ? ಹೀಗೆ ಶಿವ ಪಾರ್ವತಿಯರನ್ನು ನೋಡಿದ ಕೂಡಲೇ ಎಲ್ಲರೂ ಒಮ್ಮೆಗೇ ಎದ್ದು ಪ್ರಣಾಮ ಮಾಡಿ ಕೈ ಜೋಡಿಸಿಕೊಂಡು ನಿಂತರು.

ಶಿವನು ಪಾರ್ವತೀ ಸಹಿತನಾಗಿ ಒಂದು ವೇದಿಕೆಯ ಮೇಲೆ ಕುಳಿತು, ವ್ಯಾಸನ ಮುಖವನ್ನು ಕೋಪದ ಕಣ್ಣಿನಿಂದ ನೋಡುತ್ತ, "ಎಲೈ ದುಷ್ಟ ಬುದ್ಧಿಯವನೇ ! ಮಹಾ ಭಾರತ ಬರೆದ ಶುಂಠಾ ! ಅಹಂಕಾರದಿಂದ ನನ್ನ ಪತ್ನಿಯಂತಹ ಈ ಕಾಶೀ ನಗರವನ್ನು ಶಾಪಭ್ರಷ್ಟ ಮಾಡಲು ನೋಡುವಿಯೇನು ! ನೀನು ಕಾಶಿಯೊಳಗೆ ಅಡಿ ಇಟ್ಟದ್ದೇ ದೊಡ್ಡ ದ್ರೋಹ ! ನೀನೂ ನಿನ್ನ ಶಿಷ್ಯರೂ ಈಗಲೇ ನಮ್ಮ ರಾಜ್ಯದ ಮೇರೆ ದಾಟಿ ಹೋಗಿಬಿಡಿರಿ !" ಎಂದು ಗುಡುಗಿದನು.

ಆಗ ಅವನೊಂದಿಗಿದ್ದ ಪಾರ್ವತಿ ವ್ಯಾಸನನ್ನು ನೋಡಿ, "ಅಪ್ಪಾ ವ್ಯಾಸಾ ! ನೀನು ಬೇರೆಲ್ಲಿಗೂ ಹೋಗಬೇಡ. ಸೀದಾ ದಕ್ಷಾರಾಮಕ್ಕೆ ಹೋಗಿ ಭೀಮೇಶ್ವರನ ಸೇವೆಮಾಡಿ ಪೂಜಿಸು. ನಿನಗೆ ಸಮಸ್ತ ಶುಭಗಳೂ ಕೈಗೂಡುತ್ತವೆ. ಶಿವನು ಹೀಗೆಂದನೆಂದು ಬೇಸರಪಡಬೇಡ" ಎಂದಳು ವಾತ್ಸಲ್ಯದಿಂದ.

ಅವಳು ಹೇಳಿದ ಹಾಗೆಯೇ ವ್ಯಾಸನು ತನ್ನ ಶಿಷ್ಯರೊಂದಿಗೆ ಕೂಡಿ ಭೀಮೇಶ್ವರನನ್ನು ಅರ್ಚಿಸಲು ದಕ್ಷಾರಾಮಕ್ಕೆ ಹೋದನು.





# ಹೊಸ ಅನುಭವ

ಒಂದುಸಾರಿ ನೀಲಂಪಾಡಿ ಗ್ರಾಮಕ್ಕೆ ನಿರ್ಗುಣಾನಂದನೆಂಬ ಸ್ವಾಮಿಗಳು ತಮ್ಮ ಶಿಷ್ಯರೊಂದಿಗೆ ಬಂದರು. ಅವರ ದರ್ಶನಕ್ಕೆ ಆ ಗ್ರಾಮದ ಹಾಗು ಅಕ್ಕಪಕ್ಕ ಗ್ರಾಮಗಳಿಂದ ಅನೇಕ ಮಂದಿ ಭಕ್ತರು ಬರತೊಡಗಿದರು. ಸ್ವಾಮಿಗಳು ಅವರಿಗೆ ವೈರಾಗ್ಯದ ವಿಷಯದಲ್ಲಿ ಬೋಧನೆ ಮಾಡಿದರು. ಆಮೇಲೆ ಸೇರಿದವರಲ್ಲಿ ಕೆಲವರು ತಾವು ಇದಿರಿಸಬೇಕಾಗಿ ಬಂದ ಸಮಸ್ಯೆಗಳನ್ನು ಸ್ವಾಮಿಗಳೊಂದಿಗೆ ಹೇಳಿಕೊಂಡರು.

ನಿರ್ಗುಣಾನಂದಸ್ವಾಮಿ ಬೇಸರದಿಂದ ತಲೆಯಾಡಿಸುತ್ತಾ, "ಇವೆಲ್ಲಾ ತೀರ ಚಿಕ್ಕ ಚಿಕ್ಕ ಪ್ರಶ್ನೆಗಳು. ಇಷ್ಟಕ್ಕೇ ನೀವಿಷ್ಟು ದಿಗಿಲುಬಿದ್ದರೆ, ದೊಡ್ಡ ಸಮಸ್ಯೆಗಳು ಎದ್ದಾಗ ಏನಾಗುವಿರೋ!" ಎಂದು ಸಮಾಳಿಸಿ ಹೇಳಿ ಬಾಯಿ ಮುಚ್ಚಿಸಿ ಕಳುಹಿಸಿಬಿಟ್ಟರು.

ತಮ್ಮನ್ನು ತುಂಬಾ ಕಳವಳ ಪಡಿಸುವ ಸಮಸ್ಯೆಗಳನ್ನು ಸ್ವಾಮಿಯವರು ತೀರ ಸಣ್ಣ ವಿಷಯಗಳೆಂದು ಹಾರಿಸಿ ಹೇಳಿದುದನ್ನು ಕೇಳಿ ಅನೇಕ ಮಂದಿ ಭಕ್ತರಿಗೆ ಬಹಳ ಆಶ್ಚರ್ಯವಾಯಿತು.

ಅದನ್ನೆಲ್ಲ ಗಮನಿಸಿಕೊಂಡಿದ್ದ ಗ್ರಾಮಾಧಿಕಾರಿ ಶಿವಗಂಗಪ್ಪನವರು ಅವರನ್ನು ನೋಡಿ, "ನೀವು ಸ್ವಾಮಿಗಳ ಹತ್ತಿರ ಹೇಳಿದ್ದೆಲ್ಲಾ ಚಿಕ್ಕ ವಿಷಯಗಳೇ. ಆಧ್ಯಾತ್ಮಿಕ ಸಮಸ್ಯೆಗಳಂತಹವಾದರೆ ಅವರು ತಪ್ಪದೆ ತಕ್ಕ ಪರಿಷ್ಕಾರ ಹೇಳುತ್ತಿದ್ದರು" ಎಂದರು.

ಗ್ರಾಮಾಧಿಕಾರಿಯ ಮಾತಿನಲ್ಲಿ ನಿಜವಿರುವಂತೆ ಆ ಭಕ್ತರಿಗೆ ತೋರಿತು. ಆದರೆ ಅವರಲ್ಲಿ ಯಾರಿಗೂ ಸಾಮಾನ್ಯ ಗೃಹಸ್ಥರಿಗೆ ಇದಿರಾಗುವ ಸಮಸ್ಯೆಗಳ ಹೊರತು ಬೇರೇನೂ ಇರಲಿಲ್ಲ.

ನಿರ್ಗುಣಾನಂದ ಸ್ವಾಮಿಗಳು ಮತ್ತೆರಡು ದಿನಗಳವರೆಗೆ ಗ್ರಾಮಸ್ಥರಿಗೆ ಧರ್ಮೋಪನ್ಯಾಸವಿತ್ತರು. ಮೂರನೇ ದಿನ ರಾತ್ರಿ ಶಿವಗಂಗಪ್ಪನವರು ಶಿಷ್ಯರ ಸಮೇತ ಸ್ವಾಮಿಗಳಿಗೆ ತಮ್ಮ ಮನೆಯಲ್ಲಿ ಅತಿಥ್ಯ ವೀಯುವ ಏರ್ಪಾಡು ಮಾಡಿದರು.

ಭೋಜನವಾದ ಮೇಲೆ ಗುರುಶಿಷ್ಯರೆಲ್ಲರಿಗೂ ಶಿವಗಂಗಪ್ಪನವರು ತಮ್ಮ ಮನೆಯಲ್ಲೇ ಮಲಗುವ ಏರ್ಪಾಡು ಕೂಡಾ ಮಾಡಿಕೊಟ್ಟರು. ನಿರ್ಗುಣಾನಂದರಿಗೆ ಸೊಳ್ಳೆ ಪರದೆ ಕಟ್ಟಿಸಿದರು.

ಬೆಳಗಾದ ಮೇಲೆ ನಿರ್ಗುಣಾನಂದರ ಕಣ್ಣುಗಳು ನಿದ್ರೆಯಿಲ್ಲದೆ ಕೆಂಪಾಗಿ, ಬೇಸರದ ಮುಖದಲ್ಲಿರುವುದನ್ನು ನೋಡಿ ಶಿವಗಂಗಪ್ಪ ಅವರೊಂದಿಗೆ,

ಜೆ. ಜೆ. ರಕ್ಷ

"ಸ್ವಾಮಿ, ತಮಗೆ ರಾತ್ರಿ ಸರಿಯಾಗಿ ನಿದ್ದೆ ಬಂದಿದೆಯೇ ?" ಎಂದು ಕೇಳಿದರು.

"ನಿದ್ದೆ ಬರುವುದೇ ? ಸೊಳ್ಳೆಗಳ ಬಾಧೆಯಿಂದ ಕಣ್ಣಿನ ಮೇಲೆ ರೆಪ್ಪೆ ಬಿದ್ದಿದ್ದರೆ ತಾನೇ ?" ಎಂದರು ನಿರುತ್ಸಾಹದಿಂದ.

ಆ ಉತ್ತರವನ್ನು ಕೇಳಿ ಶಿವಗಂಗಪ್ಪ ಬಹಳ ವಿನಯದಿಂದ, "ಸ್ವಾಮಿ, ತಮಗೆ ತಿಳಿಯದ್ದೇನೂ ಇಲ್ಲ. ಈ ಋತುವಿನಲ್ಲಿ ಕೀಟಕಗಳ ಕಾಟ, ಅದರಲ್ಲೂ ಈ ಪ್ರಾಂತದಲ್ಲಿ ಸೊಳ್ಳೆಗಳ ಬಾಧೆ ತುಂಬಾ ಹೆಚ್ಚು. ಅದಕ್ಕಾಗಿಯೇ ತಮಗೆ ಸೊಳ್ಳೆ ಪರದೆ ಏರ್ಪಾಡಿಸಿದೆನು" ಎಂದರು.

"ಎಂತಹ ಸೊಳ್ಳೆ ಪರದೆ ಇದ್ದರೇನು ? ಹೇಗೋ ಒಳಗೆ ಪ್ರವೇಶಿಸಿದ ಸಣ್ಣದೊಂದು ಸೊಳ್ಳೆಯೇ ಸಾಕಲ್ಲ ! ಅದೇ ಹಲವು ಸೊಳ್ಳೆಗಳ ಹಾಗೆ ಬೆಳಗಾಗುವವರೆಗೂ ನನಗೆ ನಿದ್ದೆ ಹಿಡಿಸದಂತೆ ಮಾಡಿಬಿಟ್ಟಿತು" ಎಂದರು ನಿರ್ಗುಣಾನಂದ ಸ್ವಾಮಿ.

ಶಿವಗಂಗಪ್ಪನವರು ಏನೂ ಅರಿಯದವರಂತೆ ಮುಖಭಾವ ಮಾಡಿಕೊಂಡು, "ಅಷ್ಟೊಂದು ಸಣ್ಣ ಸೊಳ್ಳೆ ತಮ್ಮಂತಹ ಮಹಾಜ್ಞಾನಿಗಳನ್ನು ಇಷ್ಟೊಂದು ಬಾಧಿಸುವುದು ಪರಮಾಶ್ಚರ್ಯವಾಗಿದೆ, ತಾವು ಕ್ಷಮಿಸುವುದಾದರೆ, ನಿನ್ನೆ ತಮ್ಮ ಭಕ್ತರು ನಿಮ್ಮ ಮುಂದೆ ನಿವೇದಿಸಿಕೊಂಡ ಸಮಸ್ಯೆಗಳು ಇದಕ್ಕಿಂತಲೂ ಸಣ್ಣ ಸಣ್ಣ ವಿಷಯಗಳಾಗಿರಬೇಕು. ಅದಕ್ಕೇ ತಾವು ಹಾಗಂದಿರೆಂದುಕೊಳ್ಳಲಿ ?" ಎಂದರು.

ಈ ಮಾತು ನಿರ್ಗುಣಾನಂದ ಸ್ವಾಮಿಗೆ ಚುರುಕ್ಕೆನಿಸಿದಂತಾಗಿ, ತಮ್ಮ ತಪ್ಪು ಏನೆಂದು ಅರ್ಥವಾಯಿತು, ಮಾನವರನ್ನು ಹಿಡಿದು ಪೀಡಿಸುವ ಈತಿ ಬಾಧೆಗಳು, ಕೇವಲ ಧರ್ಮೋಪನ್ಯಾಸಗಳಿಂದ ತೊಲಗಿಹೋಗಲಾರವು. ಅವರಿಗೆ ತಕ್ಕ ಪರಿಷ್ಕಾರ ಮಾರ್ಗ ತೋರಿಸಬೇಕಾದುದೇ ನ್ಯಾಯ.

"ನಿಜ ! ನಿಜ ! ಗೊತ್ತಾಯಿತು!" ಎಂದಷ್ಟೇ ಹೇಳಿದರು ಸ್ವಾಮಿಗಳು.

ಆ ದಿನ ಸಾಯಂಕಾಲವೇ ನಿರ್ಗುಣಾನಂದರು ಭಕ್ತರನ್ನೆಲ್ಲಾ ಸಮಾವೇಶಗೊಳಿಸಿ, ಅವರವರ ಸಮಸ್ಯೆಗಳಿಗೆ ತಕ್ಕ ಪರಿಷ್ಕಾರ ಮಾರ್ಗ ಸೂಚಿಸುವ ಮಾತುಗಳನ್ನು ಹೇಳಿ ತೃಪ್ತಿಪಡಿಸಿದರು.

ಎರಡು ದಿನಗಳ ಮೇಲೆ ಅವರು ಮತ್ತೊಂದು ಗ್ರಾಮಕ್ಕೆ ಹೊರಟು, ಶಿವಗಂಗಪ್ಪನವರೊಂದಿಗೆ, "ಆ ದಿನ ರಾತ್ರಿ ಒಂದು ಸೊಳ್ಳೆ ನನಗೆ ಒಳ್ಳೆಯ ಅನುಭವ ಕಲಿಸಿತು. ಲೋಕದಲ್ಲಿ ಮನುಷ್ಯನು ತಾನಿರುವ ಪ್ರದೇಶಕ್ಕೆ ಅನುಗುಣವಾಗಿ ಅವನ ಸಮಸ್ಯೆಗಳ ರೂಪ ಮಾರ್ಪಡುತ್ತಾ ಇರುತ್ತದೆ. ಅಷ್ಟೇ ಹೊರತು ಸಮಸ್ಯೆಗಳಲ್ಲಿ ಚಿಕ್ಕವು ದೊಡ್ಡವು ಎಂಬುದೇನಿಲ್ಲ" ಎಂದು ಹೇಳಿ ಅಲ್ಲಿಂದ ಹೊರಟರು.





# ಸ್ವಯಂಕೃತಾಪರಾಧ

ಒಂದು ಊರಿನಲ್ಲಿ ನಿರ್ವಾಕನೆಂಬ ಒಬ್ಬ ವೈದ್ಯನಿದ್ದನು. ಅವನು ಬಹಳ ಕಾಲದಿಂದ ವೈದ್ಯ ವೃತ್ತಿಯಲ್ಲಿದ್ದರೂ ಸಂಪಾದನೆ ಮಾತ್ರ ಎಷ್ಟೆಂದರಷ್ಟೇ ಇತ್ತು.

ಅವನಿಗೆ ವೈದ್ಯವೃತ್ತಿ ಕಲಿಸಿದವನು ತಂದೆಯೇ. ಆಗ ಮಗನ ಧೋರಣೆಯನ್ನು ನೋಡಿ ತಂದೆಯಾದ ಧರಣೀಶನು, "ಮುಖ್ಯವಾಗಿ ವೈದ್ಯನಾದವನಿಗೆ ಧನಾಕಾಂಕ್ಷೆಯೇ ಗುರಿಯಾಗಿರಬಾರದು. ಪ್ರತಿ ರೋಗಿಯನ್ನೂ ಶ್ರದ್ಧೆಯಿಂದ ಪರಿಶೀಲಿಸಿ, ಅವನ ರೋಗಕ್ಕೆ ತಕ್ಕ ಔಷಧವೇನೆಂಬುದನ್ನು ಕಂಡುಹಿಡಿದು ಅಂತಹ ಔಷಧ ಕೊಡಬೇಕಾದುದೇ ಮುಖ್ಯ. ಯಾವ ಮದ್ದು ಹೇಗೆ ಕೆಲಸ ಮಾಡುತ್ತದೆಂದು, ಯಾವ ರೋಗಿಗೆ ಯಾವ ಮದ್ದು ಉಪಯೋಗವಾಗುತ್ತದೆಂದು ತಿಳಿದುಕೊಳ್ಳಬೇಕು. ನಿನ್ನ ಅನುಭವವು ಹೆಚ್ಚಿದ ಹಾಗೆ ಎಂತಹ ರೋಗವನ್ನಾದರೂ ಬಗ್ಗಿಸಬಲ್ಲ ಗಟ್ಟಿಗ ವೈದ್ಯನಾಗುವಿ. ನಿನ್ನ ರೀತಿ ಹಾಗೆ ಕಾಣುವುದಿಲ್ಲ. ನಿನ್ನ ಆಶೆ ಮುಖ್ಯವಾಗಿ ಹಣದ ಮೇಲಿದೆ. ರೋಗಿಯೊಬ್ಬನು ಬಂದ ಕೂಡಲೇ ಅವನ ರೋಗದ ಸಂಗತಿ ನೋಡುವುದನ್ನು ಬಿಟ್ಟು, ಅವನು ಕೊಡುವ ಹಣದ ಲೆಕ್ಕ ಎಷ್ಟೆಂಬುದನ್ನು ಆಲೋಚಿಸುತ್ತೀ. ಆದುದರಿಂದಲೇ ನೀನು ವೈದ್ಯನಾಗಿ ಪ್ರಸಿದ್ಧಿಗೆ ಬರಲಾರೆ. ಅದಕ್ಕೆ ತಕ್ಕ ಹಾಗೆ ಹಣವೂ ಬಂದು ಸೇರಲಾರದು. ನಿನ್ನದೆಲ್ಲಾ ಎಷ್ಟೆಂದರಷ್ಟೇ" ಎಂದು ಮಗನಿಗೆ ಆಗಾಗ ಹೇಳುತ್ತಿದ್ದನು. ತಂದೆಯ ಮಾತು ಅವನಿಗೆ ಬೇಸರ ತರುತ್ತಿತ್ತು. ಆ ಬಗೆಯ ಹಿತವಾಕ್ಯಗಳು ನಿರ್ವಾಕನಿಗೆ ರುಚಿಸುತ್ತಿರಲಿಲ್ಲ. ಅದನ್ನು ಅವನು ಈ ಕಿವಿಯಿಂದ ಕೇಳಿ ಆ ಕಿವಿಯಿಂದ ಬಿಟ್ಟು, ತನ್ನ ರೀತಿಯಲ್ಲೇ ವೈದ್ಯ ವೃತ್ತಿ ನಡೆಸುತ್ತಿದ್ದನು. ಮಗನು ತನಗಿಂತ ದೊಡ್ಡ ವೈದ್ಯನೆಂದು ತಂದೆಗೆ ಗೊತ್ತಿದ್ದಿತು. ಆದರೆ ಮಗನಿಗೆ ಉಪಕಾರದ ಬುದ್ಧಿ ಇಲ್ಲವೆಂಬುದೇ ತಂದೆಯ ಚಿಂತೆ.

ಹೀಗಿರುವಾಗ ಒಂದು ದಿನ ಒಬ್ಬ ಭಿಕ್ಷುಕನು ಆಲುತ್ತ ಮಾಲುತ್ತ ಬಂದು ನಿರ್ವಾಕನ ಮನೆಯ ಮುಂದೆ ಕಣ್ಣುಕತ್ತಲೆ ಬಂದು ತಲೆ ತಿರುಗಿ ಬಿದ್ದುಬಿಟ್ಟನು.

ಅದನ್ನು ನೋಡಿ ನಿರ್ವಾಕನ ತಂದೆ ಧರಣೀಶನು ಬೇಗ ಬೇಗ ಬಂದು ಭಿಕ್ಷುಕನನ್ನು ಎತ್ತಿ ಜಗಲಿಯ ಮೇಲೆ ಮಲಗಿಸಿದನು.

"ವಸುಂಧರ"



ಧರಣೇಶನು ಆಶ್ಚರ್ಯದಿಂದ "ಹಾಗಾದರೆ ನೀನು ತಲೆತಿರುಗಿ ಹೀಗೆ ಬೀಳಲು ಹಸಿವೆ ಕಾರಣ ವಲ್ಲವೇನು ?" ಎಂದು ಕೇಳಿದನು.

"ಅಲ್ಲ ಸ್ವಾಮಿ, ಇದೊಂದು ರೋಗ. ದಿನಾ ನಾಲ್ಕೈದು ಸಾರಿ ಯಾವುದೋ ಒಂದು ಹೊತ್ತಿನಲ್ಲಿ ಹೀಗೆ ತಲೆತಿರುಗಿ ಬೀಳುತ್ತೇನೆ. ಇದರಿಂದ ಭಿಕ್ಷೆಗಾಗಿ ತಿರುಗಾಡಲು ಬಹಳ ತೊಂದರೆಯಾಗುತ್ತದೆ. ನಾನು ಬಿದ್ದಾಗ ನಾಲ್ಕಾರು ಮಂದಿ ದಾರೀ ಹೋಕರು ದುಡ್ಡು ಕೂಡಾ ಹಾಕುತ್ತಾರೆ. ಅದೂ ಒಂದು ಲಾಭ ನನಗೆ" ಎಂದನು ಭಿಕ್ಷುಕ.

ಅದನ್ನು ಕೇಳಿ ಧರಣೇಶನು, "ತಪ್ಪಪ್ಪಾ. ಹಣ ಕ್ಕೋಸ್ಕರ ರೋಗವನ್ನು ಉಳಿಸಿಕೊಳ್ಳಬಾರದು. ನಿನ್ನ ರೋಗ ತಗ್ಗ ಬೇಕಾದರೆ. ನನ್ನ ಹತ್ತಿರ ಹೇಳು. ನನ್ನ ಮಗನ ಮೂಲಕ ನಿನಗೆ ತಕ್ಕ ಔಷಧ ಕೊಡಿ ಸುತ್ತೇನೆ" ಎಂದನು.

ಭಿಕ್ಷುಕನು ದೀನವಾದ ಮುಖಭಾವದಿಂದ, "ನನ್ನ ರೋಗವನ್ನು ಗುಣಮಾಡಲು ಯಾವ ವೈದ್ಯರಿಗೂ ಸಾಧ್ಯವಿಲ್ಲ ಸ್ವಾಮಿ. ದೊಡ್ಡ ದೊಡ್ಡವರೇ ಏನೂ ಮಾಡಲಾಗದೆ ಸರಳಿಕೊಂಡಿರುವಂಥ ರೋಗವಿದು" ಎಂದನು.

"ನನ್ನ ಮಗನು ಅಂತಹ ವೈದ್ಯರಂಥವನಲ್ಲ. ನಿನಗೆ ಇಷ್ಟವಿದ್ದರೆ ಹೇಳು. ಈಗಲೇ ಔಷಧ ಕೊಡಿ ಸುತ್ತೇನೆ" ಎಂದನು ಧರಣೇಶ.

ಭಿಕ್ಷುಕನು ಸಣ್ಣಗೆ ನಕ್ಕು, "ಇಷ್ಟವಿಲ್ಲದೆ ಉಂಟೇ ಸ್ವಾಮಿ ? ಊರೊಳಗೆ ಹತ್ತು ಮಂದಿಗಳ ಮುಂದೆ ಬಿದ್ದರೆ ಅಪಾಯವಿಲ್ಲ. ಯಾರೂ ಇಲ್ಲದ ಎಲ್ಲಿಯೋ ಮೂಲೆಯಲ್ಲಿ ನಾನು ಧಿಡೀರನೆ ಬಿದ್ದುಬಿಟ್ಟರೆ ಏನಾಗಿ ಹೋದೀತೋ ! ಒಂದೆರಡು ಸಾರಿ ನಾನು ಹಾಗೆ ಬಿದ್ದಾಗ ಪಾಪದ ಭಿಕ್ಷುಕನೆಂಬ ದಯಾದಾಕ್ಷಿಣ್ಯ ವೇನಿಲ್ಲದೆ ನನ್ನಲ್ಲಿದ್ದ ಬಿಡಿಗಾಸುಗಳನ್ನು ಸಹಾ ತೆಗೆದುಕೊಂಡು ಹೋಗಿದ್ದಾರೆ ದುಷ್ಟರು. ನನ್ನ ಈ

ಭಿಕ್ಷುಕನ ಎದೆ ಹೊಡೆದುಕೊಳ್ಳುತ್ತಿದ್ದಿತು. ಉಸಿ ರಾಡುತ್ತಲೂ ಇದ್ದಿತು. ಅವನು ಹಸಿವೆಯಿಂದ ಬಲಗುಂದಿ ಬಸವಳಿದು ಬಿದ್ದನೆಂದು ಭಾವಿಸಿ ಧರಣೇಶನು ಅವನ ಮುಖಕ್ಕೆ ನೀರು ಚೆಲ್ಲಿ ಬೋದ ಬರುವಂತೆ ಮಾಡಿದನು.

ಭಿಕ್ಷುಕನು ಎದ್ದು ಕುಳಿತು, ಧರಣೇಶನಿಗೆ ಕೈ ಜೋಡಿಸಿ ಅಲ್ಲಿಂದ ಹೊರಟು ಹೋಗಲು ಮೆಲ್ಲನೆ ಅಡಿ ತೆಗೆದನು.

ಧರಣೇಶನು ಅವನನ್ನು ತಡೆದು, "ಈ ಹೊತ್ತಿನ ಊಟ ಇಲ್ಲಿಯೇ ಹೊಟ್ಟೆ ತುಂಬ ಮಾಡಿ ಹೋಗುವಿಯಂತೆ" ಎಂದನು ಕನಿಕರದಿಂದ.

"ಬೇಡ ಸ್ವಾಮಿ. ಈ ಮೊದಲೇ ದಯಾಮಯಿ ಯಾದ ಒಬ್ಬಳು ತಾಯಿ ನನಗೆ ಹೊಟ್ಟೆ ತುಂಬಾ ಆಹಾರ ಬಡಿಸಿದಳು. ನಾನಿರುವ ಹಳೇ ಸತ್ರದ ಕಡೆಗೆ ಹೋಗುತ್ತಾ, ಇಲ್ಲಿ ಹೀಗೆ ಬಿದ್ದುಬಿಟ್ಟೆ !" ಎಂದನು.

ರೋಗವನ್ನು ನಿಜಕ್ಕೂ ಗುಣಪಡಿಸಿಬಿಟ್ಟರೆ ನಿಮ್ಮ ಋಣವನ್ನು ಹೇಗೆತಾನೇ ತೀರಿಸಿಕೊಂಡೇನು ? " ಎಂದನು.

"ಹಾಗಾದರೆ ಸರಿ" ಎಂದು ಧರಣೀಶನು ಮನೆಯೊಳಗೆ ಹೋಗಿ, ಭಿಕ್ಷುಕನ ಸಮಾಚಾರ ವನ್ನು ಮಗನೊಂದಿಗೆ ಹೇಳಿ, "ಬೇಡದ ಕೆಲಸ ವೆನ್ನಬೇಡ. ಮನುಷ್ಯರಾಗಿರುವವರಲ್ಲಿ ಮಾನವತ್ವದ ಭಾಗ ಎಷ್ಟಿರುವುದೆಂದು ಪರೀಕ್ಷಿಸಲಿಕ್ಕಾಗಿ ಪರಮೇಶ್ವರನೇ ಹೀಗೆ ಬಂದಿದ್ದರೂ ಇರಬಹುದು. ಹಣಕೊಡುವ ಶಕ್ತಿಯಿಲ್ಲದವನೆಂದೂ, ಅನಾಥ ಯಾಚಕನೆಂದೂ ಅಲಕ್ಷ್ಯ ಮಾಡಬೇಡ. ನೀನು ಶ್ರದ್ಧೆಯಿಂದ ಅವನ ರೋಗ ಪರೀಕ್ಷೆಮಾಡಿ, ಒಳ್ಳೆಯ ಮದ್ದುಕೊಡು. ನಿನಗೆ ಒಳ್ಳೆಯದೇ ಆಗುತ್ತದೆಂದು ನಂಬು. ನಿನ್ನ ಜಾತಕವೇ ಬದಲಾ ಗುವ ಸಂದರ್ಭವಿದು. ನನ್ನ ಮಾತು ನಂಬು" ಎಂದನು.

ತಂದೆಯ ಮಾತನ್ನು ಅಲ್ಲಗಳೆಯಲಾಗದೆ ನಿರ್ವಾಕನು ಇಷ್ಟವಿಲ್ಲದೆಯೇ ಹೊರಗೆ ಬಂದು ಭಿಕ್ಷುಕನನ್ನು ಪರೀಕ್ಷಿಸಿ, ಒಳಗೆ ಹೋದನು. ಸ್ವಲ್ಪ ಹೊತ್ತಿನ ಮೇಲೆ ಏನೋ ಮದ್ದು ತಯಾರಿಸಿ ತಂದು ಭಿಕ್ಷುಕನಿಗೆ ಕೊಟ್ಟು, "ನಾಲ್ಕು ದಿನಗಳ ವರೆಗೆ ಈ ಮದ್ದನ್ನು ಹೊತ್ತಿಗೆ ಎರಡು ಗುಳಿಗೆಗಳ ಹಾಗೆ ತೆಗೆದುಕೋ. ನಿನ್ನ ರೋಗ ಗುಣವಾಗಿ ಬಿಡುತ್ತದೆ" ಎಂದು ಹೇಳಿದನು.

ಭಿಕ್ಷುಕನು ನಿರ್ವಾಕನಿಗೂ ಧರಣೀಶನಿಗೂ ನಮಸ್ಕಾರಮಾಡಿ ಹೊರಟುಹೋದನು.

ಧರಣೀಶನು ಮಗನೊಂದಿಗ, "ನೀನು ಮಾಡಿದ ಕೆಲಸ ನನಗೆ ಬಹಳ ಸಂತೋಷವನ್ನುಂಟುಮಾಡಿತು. ದೇವತೆಗಳು ನಿನ್ನನ್ನು ತಪ್ಪದೆ ಆಶೀರ್ವದಿಸುತ್ತಾರೆ. ಬೇಗದಲ್ಲೇ ನಿನ್ನ ಅದೃಷ್ಟದ ಕಣ್ಣು ತೆರೆಯುತ್ತದೆ, ನೋಡು" ಎಂದನು.



ನಿರ್ವಾಕನು ಅಸಹನೆಯಿಂದ, "ನೀವು ಹೇಳುವ ಹಾಗೆ ದೇವತೆಗಳು ನನ್ನನ್ನು ಆಶೀರ್ವಾದಮಾಡಿ, ಅದೃಷ್ಟ ಕಣ್ಣುಬಿಡಿಸಿ ನನ್ನ ಜಾತಕ ಬದಲಾದರೆ ಸಂತೋಷವೇ. ಆದರೆ ಆ ಭಿಕ್ಷುಕನ ರೋಗ ತಗ್ಗುತ್ತ ದೆಂಬ ನಂಬುಗೆ ನನಗಿಲ್ಲ. ನನಗೆ ತಿಳಿದ ಮಟ್ಟಿಗೆ ಅವನಿಗೆ ಬಂದ ರೋಗಕ್ಕೆ ಮದ್ದೇ ಇಲ್ಲ" ಎಂದನು.

"ಹಾಗಾದರೆ ನೀನು ಅವನಿಗೆ ಯಾವ ಮದ್ದು ಕೊಟ್ಟೆ ?" ಎಂದು ಗಾಬರಿಯಿಂದ ಕೇಳಿದನು ಧರಣೀಶ.

"ನಿಮ್ಮ ತೃಪ್ತಿಗಾಗಿ ಅಪಾಯವೇನಿಲ್ಲದ ಗುಳಿಗೆಗಳನ್ನು ಕೊಟ್ಟು ಕಳಿಸಿದ್ದೇನೆ. ಇನ್ನು ಮೇಲೆ ಅವನ ಅದೃಷ್ಟ !" ಎಂದನು ನಿರ್ವಾಕ.

ಭಿಕ್ಷುಕನ ಅದೃಷ್ಟವು ಆರೋಗ್ಯಕ್ಕೆ ಸಂಬಂಧಿಸಿದ ವರೆಗೆ ಚೆನ್ನಾಗೇ ಇದ್ದಿತು. ನಿರ್ವಾಕನು ಕೊಟ್ಟ ಔಷಧಿ ಕೂಡಲೇ ಅವನ ಮೇಲೆ ತನ್ನ ಪ್ರಭಾವ ತೋರಿಸಿತು.



ಎಂಟು ದಿನಗಳ ಮೇಲೆ ಆ ಭಿಕ್ಷುಕನು ನಿರ್ವಾಕನ ಬಳಿಗೆ ಬಂದು ನಮಸ್ಕಾರ ಮಾಡಿ, "ಅಯ್ಯಾ, ತಮ್ಮ ಹಸ್ತಗುಣ ತುಂಬ ಒಳ್ಳೇದು. ಒಂದು ಕಾಲದಲ್ಲಿ ನಾನು ಭಿಕ್ಷುಕನಾಗಿರಲಿಲ್ಲ. ಕಷ್ಟಪಟ್ಟು ಕೆಲಸಮಾಡಿ ಹೊಟ್ಟೆ ತುಂಬಿಸಿಕೊಳ್ಳುವವನಾಗಿಯೇ ಇದ್ದೆ. ಆದರೆ ಈ ರೋಗದ ಕಾರಣದಿಂದ ಯಾವ ಕೆಲಸಕ್ಕೂ ಪ್ರಯೋಜನವಿಲ್ಲದವನಾದೆ. ಈಗ ಭಿಕ್ಷೆ ಬೇಡುವುದರ ಹೊರತು ಬೇರೆ ದಾರಿಯೇ ಇಲ್ಲದೆ ಹೋಗಿದೆ. ಇನ್ನು ಮೇಲೆ ಹಳೆಯ ಬದುಕನ್ನೇ ಸಾಗಿಸಬೇಕೆಂದಿದ್ದೇನೆ" ಎಂದು ಬಗ್ಗಿ ನಿರ್ವಾಕನ ಕಾಲಿಗೆ ಅಡ್ಡಬಿದ್ದು ಕೃತಜ್ಞತೆ ತೋರಿಸಿದನು.

ನಿರ್ವಾಕನು ಚಿಂತಿಸುತ್ತ "ನನ್ನ ವೈದ್ಯವು ನಿನ್ನಂತಹರಿಗೇ ಉಪಯೋಗವಾಗುವಂಥದ್ದು. ಆದ್ದರಿಂದಲೇ ನನ್ನ ವೈದ್ಯಕೀಯ ಸಂಪಾದನೆಯಲ್ಲಿ ಯಾವ ಬೆಳವಣಿಗೆಯೂ ಇಲ್ಲ. ನನ್ನ ಅದೃಷ್ಟ ಇಷ್ಟೇ" ಎಂದನು.

"ಅಯ್ಯಾ, ನಿಮಗೆ ನಾನು ತಕ್ಕ ರೀತಿಯಲ್ಲಿ ಹಣ ಕೊಡುವಷ್ಟು ಶಕ್ತನಲ್ಲ. ಆದರೆ ನಿಮಗೆ ಒಳ್ಳೆಯದಾಗಿ ಹಣ ಸಂಪಾದಿಸುವಂಥ ಉಪಾಯ ಹೇಳಬಲ್ಲೆನು. ಆ ರೀತಿಯಲ್ಲಾದರೂ ನನ್ನ ಋಣವು ಸ್ವಲ್ಪ ತೀರಬಹುದು" ಎಂದನು ಭಿಕ್ಷುಕ.

ಆ ಮಾತು ಕೇಳಿ ನಿರ್ವಾಕನು ರೇಗಿಕೊಂಡು, "ಹಣ ಸಂಪಾದಿಸಲಿಕ್ಕಾಗಿ ಒಬ್ಬ ಭಿಕ್ಷುಕನ ಆಲೋಚನೆ ಕೇಳುವಷ್ಟು ಹೀನಸ್ಥಿತಿ ನನಗಿನ್ನೂ ಬಂದಿಲ್ಲ" ಎಂದನು.

ಆ ಸಮಯದಲ್ಲಿ ಅಲ್ಲಿಗೆ ಬಂದ ಧರಣೀಶನು ಭಿಕ್ಷುಕನಿಗೆ ಮಗನು ಕೊಟ್ಟ ಉತ್ತರವನ್ನು ಕೇಳಿ, "ಯಾವ ಹುತ್ತದಲ್ಲಿ ಯಾವ ಹಾವೋ ಯಾರಿಗೆ ಗೊತ್ತು? ಅವನು ಹೇಳುವುದನ್ನು ಪೂರ್ತಿ ಕೇಳು ಅಪ್ಪಾ" ಎಂದನು.

ಆಗ ಭಿಕ್ಷುಕನು ನಿರ್ವಾಕನೊಂದಿಗೆ, "ಅಯ್ಯಾ, ಇಲ್ಲಿಗೆ ಶರನ್ನಗರಕ್ಕೆ ಇಪ್ಪತ್ತು ಹರದಾರಿ ದೂರವಷ್ಟೇ ಇದ್ದೀತು. ಆ ನಗರದಲ್ಲಿ ಶ್ವೇತಗುಪ್ತ ಎಂಬ ವ್ಯಾಪಾರಿಯೊಬ್ಬರಿದ್ದಾರೆ. ಅವರು ಎಂದೋ ಕೋಟೀಶ್ವರರಾಗಿದ್ದಾರೆ. ಆದರೆ ಏನು ಲಾಭ ಹೇಳಿ? ಅವರಿಗೆ ಕೂಡಾ ನನಗೆ ಬಂದಂತಹ ರೋಗವೇ ಹಿಡಿದಿದೆ. ಬಹಳ ವರ್ಷಗಳಿಂದ ಸಂಕಟಪಟ್ಟುಕೊಂಡಿದ್ದಾರೆ. ಎಷ್ಟೋ ವೈದ್ಯರು ಅವರಿಗೆ ಮದ್ದು ಕೊಟ್ಟು ಕೈ ಕೊಡರಿಕೊಂಡು ಹೋಗಿದ್ದಾರೆ. ಕಡೆಗೆ ಅವರು ಬೇಸತ್ತು ಹೋಗಿ, ತನಗೆ ಮದ್ದುಕೊಟ್ಟು ಆ ರೋಗವನ್ನು ಗುಣಪಡಿಸುವವರಿಗೆ ಲಕ್ಷ ವರಹ ಕೊಡುತ್ತೇನೆಂದು ಡಂಗುರ ಹಾಕಿಸಿದ್ದಾರೆ. ನಾನು ಖಂಡಿತ ಹೇಳುತ್ತೇನೆ. ನೀವು ಆ ಬಹುಮಾನವನ್ನು ಖಂಡಿತ ಪಡೆಯಬಹುದು. ಭಿಕ್ಷುಕನ ಮಾತು ಅಂತ ಅಲಕ್ಷ್ಯ ಮಾಡಬೇಡಿ ಸ್ವಾಮಿ" ಎಂದು ಹೇಳಿ ದೊಡ್ಡದೊಂದು ನಮಸ್ಕಾರ ಮಾಡಿ ಹೊರಟು ಹೋದನು.

ಏಕೋ ಆ ಮಾತು ಕೇಳಿ ನಿರ್ವಾಕನಿಗೆ ದೊಡ್ಡ ಪೆಟ್ಟುಬಿದ್ದಂತೆ ಮುಖ ಬಾಡಿಹೋಯಿತು. ಅದನ್ನು ಗಮನಿಸದೆ ಧರಣೀಶನು ಮಗನನ್ನು ನೋಡಿ, "ನೋಡಿದಿಯಾ? ಧನಿಕ ಬಢವ ಎಂಬ ತಾರತಮ್ಯ ನೋಡದೆ ವ್ಯಾಧಿಯನ್ನು ಗುಣಪಡಿಸ ಬೇಕೆಂಬ ಹಟದಿಂದ ಚಿಕಿತ್ಸೆ ಮಾಡುವ ವೈದ್ಯನಿಗೆ ಎಂದಿಗಾದರೂ ಮೇಲಾಗದೆ ಹೋಗದು. ಈ ಭಿಕ್ಷುಕನಿಗೆ ಸಹಾಯಮಾಡಿದಿ. ದೇವತೆಗಳು ನಿನ್ನನ್ನು ಆಶೀರ್ವಾದ ಮಾಡಿದರು. ನಿನ್ನ ಜಾತಕ ಬದಲಾಯಿಸುವ ಸಂದರ್ಭ ಬಂತು" ಎಂದನು ಸಂತೋಷದಿಂದ.

ನಿರ್ವಾಕನು ದೀನಸ್ವರದಿಂದ, "ಅಪ್ಪಾ, ನೀವು ಹೇಳುವ ಹಾಗೆ ಮಾಡಿದ್ದರೆ ನಿಜವಾಗಿಯೂ ನನ್ನ ಜಾತಕ ಬದಲಾಗಿ ಹೋಗುತ್ತಿತ್ತು. ನಾನು ಮನಸ್ಸು ಕೊಟ್ಟು ಆ ಭಿಕ್ಷುಕನಿಗೆ ಚಿಕಿತ್ಸೆ ಮಾಡಲಿಲ್ಲ. ನಿಮ್ಮ ಮಾತಿಗೆ ರೋಸಿಕೊಂಡು ಕೋಪದಿಂದ ಯಾವುದೋ ಕೈಗೆ ಸಿಕ್ಕಿದ ಮೂಲಿಕೆಯ ಗುಳಿಗೆ ಮಾಡಿ ಅವನಿಗೆ ಕೊಟ್ಟೆ...ಅಷ್ಟೇ" ಎಂದನು.

"ಆದರೆ ಮಾತ್ರ ನಷ್ಟವೇನಿದೆ? ಆ ಗುಳಿಗೆಗಳನ್ನೇ ಶ್ವೇತಗುಪ್ತನಿಗೂ ಕೊಟ್ಟುಬಿಡೇನು? ಅದೊಂದು ದೊಡ್ಡ ಕಷ್ಟವೆ? ರೋಗಕ್ಕೆ ಧನಿಕ ಬಡವ ಎಂಬ ವ್ಯತ್ಯಾಸವೇನಿಲ್ಲ" ಎಂದನು ಧರಣೀಶ.

ನಿರ್ವಾಕನು ಒಂದೆರಡು ಕ್ಷಣ ಮೌನವಾಗಿದ್ದು, "ನನ್ನ ಸಂಕಟ ಅದಲ್ಲ ಅಪ್ಪಾ. ಭಿಕ್ಷುಕನು ನನಗೆ ವಿಷಯವನ್ನು ಮೊದಲೇ ಹೇಳಬೇಕಿತ್ತು. ಅವನ ಮದ್ದಿಗೆ ಯಾವ ಮೂಲಿಕೆ ಉಪಯೋಗಿಸಿದ್ದೇನೋ ನನಗೇ ಗೊತ್ತಿಲ್ಲ. ಕೋಪದ ಆಕ್ರೋಶದಲ್ಲಿ ಏನನ್ನೋ ತೆಗೆದು ಗುದ್ದಿ ಅರೆದು ಗುಳಿಗೆ ಹಿಡಿದು ಕೊಟ್ಟೆ. ಈಗ ಅದೇ ಗುಳಿಗೆಯನ್ನು ತಯಾರು ಮಾಡಲು ನನ್ನಿಂದಾಗುವಂತಿಲ್ಲ. ನಮ್ಮ ಮನೆಯ ಸುತ್ತಲೂ ಎರಡು ಸಾವಿರದಷ್ಟು ಏನೇನೋ ಮೂಲಿಕೆ ಸೊಪ್ಪುಗಳಿವೆ. ನಾನು ತೆಗೆದ ಮೂಲಿಕೆ ಗಳು ಯಾವುದೋ ನೆನಪೇ ಇಟ್ಟುಕೊಂಡಿಲ್ಲ" ಎಂದನು.

"ಹುಂ. ಸ್ವಯಂಕೃತಾಪರಾಧಕ್ಕೆ ಪರಿಹಾರವೇ ಇಲ್ಲ. ನಿನ್ನ ಕರ್ಮ ಇಷ್ಟೇ ಅನ್ನು. ಅನುಭವಿಸಪ್ಪ, ಅನುಭವಿಸು" ಎಂದು ಹೇಳಿ ಧರಣೀಶನು ಹೊರಟುಹೋದನು.

ಈ ಘಟನೆಯಿಂದ ನಿರ್ವಾಕನಿಗೆ ಬುದ್ಧಿ ಬಂತು. ವೈದ್ಯನು ಕೇವಲ ಹಣದ ಮೇಲೆಯೇ ಕಣ್ಣಾಗಿರ ಬಾರದೆಂದು ತಿಳಿಯಿತು. ಆಮೇಲೆ ಅವನು ತಂದೆ ಹೇಳಿದ ಪದ್ಧತಿಯಲ್ಲಿ ವೈದ್ಯ ಪ್ರಾರಂಭಿಸಿ ಒಳ್ಳೆಯ ವೈದ್ಯನೆಂದು ಹೆಸರು ಸಂಪಾದಿಸಿಕೊಂಡನು. ಆದರಿಂದ ಅವನ ಸಂಪಾದನೆಯೂ ಚೆನ್ನಾಗಿ ಹೆಚ್ಚಿತು.





# ಬಡವಳ ಕೃತಜ್ಞತೆ

ಒಂದಾನೊಂದು ಕಾಲದಲ್ಲಿ ಬೀರೂಟ್ ನಗರದಲ್ಲಿ ಸುಲೇಮಾನ್ ಎಂಬ ಬಡವನಾದ ಮುದುಕನೊಬ್ಬನು ಬದುಕಿಕೊಂಡಿದ್ದನು. ಅವನಿಗೆ ಹೆಂಡತಿಯೂ ಇಬ್ಬರು ಹೆಣ್ಣು ಮಕ್ಕಳೂ ಇದ್ದರು. ಹೆಂಡತಿಯೂ ಮಗಳಂದಿರೂ ನೂಲು ನೇಯುತ್ತಿದ್ದರು. ಮುದುಕ ಸುಲೇಮಾನ್ ಆ ನೂಲುಂಡೆಗಳನ್ನು ತೆಗೆದುಕೊಂಡು ಸಂತೆಗೆ ಒಯ್ದು ಮಾರಿ ಬಂದ ಹಣದಿಂದ ಕಾಲ ದೂಡುವನು. ಉಳಿಸಿಡುವುದಕ್ಕೆ ಮಾತ್ರ ಒಂದು ಕಾಸೂ ಉಳಿಯುತ್ತಿದ್ದಿಲ್ಲ. ಆದುದರಿಂದ ಇಬ್ಬರು ಹೆಣ್ಣು ಮಕ್ಕಳಿಗೆ ಮದುವೆಯ ವಯಸ್ಸು ಬಂದಿದ್ದರೂ ಮದುವೆ ಮಾಡಲಾಗದೆ ಮುದುಕನಿಗೆ ದಿಗಿಲು ಹಿಡಿಯತೊಡಗಿತ್ತು.

ಒಂದು ದಿನ ಸುಲೇಮಾನ್ ಏನೋ ಮೈ ಸರಿಯಿಲ್ಲದೆ ಜಡಭಾರದವನಾದುದರಿಂದ ಸಂತೆಗೆ ಹೋಗಲು ಶಕ್ತಿಯಿಲ್ಲದೆ ಹೋಯಿತು. ಆ ದಿನ ಅವನ ಹಿರಿಯ ಮಗಳು ನೂಲು ಮಾರಿಕೊಂಡು ಬರಲು ಸಂತೆಗೆ ಹೋದಳು. ಸಂತೆಯಲ್ಲಿ ಅವಳು ಅಂದುಕೊಂಡಿದ್ದ ಬೆಲೆಗೆ ನೂಲುಂಡೆಗಳನ್ನು ಮಾರಿ, ಸಿಕ್ಕಿದ ಹಣಕ್ಕೆ ಮೂರು ರೊಟ್ಟಿಗಳನ್ನು ಕೊಂಡುಕೊಂಡು ಮನೆಗೆ ಹೊರಟಳು. ಸಮೀಪದ ದಾರಿಯೆಂದು ಅವಳು ಒಂದು ಸಂದುದಾರಿಯಿಂದ ಬರುವಾಗ ಸಮೀಪದಲ್ಲಿದ್ದ ಗುಡಿಸಲಿನೊಳಗಿನಿಂದ, ಯಾವಳೋ ಒಬ್ಬಳ ದೀನವಾದ ನರಳಿಕೆಯ ಧ್ವನಿ ಕೇಳಿಸಿತು. ಅವಳು ಗುಡಿಸಲಿನೊಳಗೆ ಬಗ್ಗಿ ನೋಡಿದಳು. ಗುಡಿಸಲಿನೊಳಗೆ ನೆಲದ ಮೇಲೆ ಇಬ್ಬರು ಹಸುಮಕ್ಕಳೊಂದಿಗೆ ಒಬ್ಬಳು ಬಡವೆ ಮಲಗಿಕೊಂಡು ಏಳಲಿಕ್ಕೆ ಕೂಡಾ ಶಕ್ತಿಯಿಲ್ಲದೆ ದೀನ ಶಬ್ದದಿಂದ ನರಳಿಕೊಂಡಿದ್ದಳು.

ಸುಲೇಮಾನನ ಮಗಳು ಒಳಗೆ ಹೋಗಿ, "ಏನಮ್ಮಾ, ನಿನ್ನ ಸಂಕಟ ? ಏಕೆ ಹೀಗೆ ನರಳಿಕೊಂಡಿರುವಿ ? " ಎಂದು ಕೇಳಿದಳು.

"ಹಸಿವೆಯಮ್ಮಾ, ಹಸಿವೆ. ಮೂರು ದಿನಗಳಿಂದ ತಿಂಡಿಯಿಲ್ಲದೆ ಒಣಗಿಹೋಗುತ್ತಿದ್ದೇವೆ" ಎಂದಳು ಆ ಬಡವೆ ನಡುಗುವ ಸ್ವರದಲ್ಲಿ.

"ನನ್ನ ಹತ್ತಿರ ಮೂರು ರೊಟ್ಟಿಗಳಿವೆ. ಈ ಹೊತ್ತಿಗೆ ನಿಮಗೆ ಸರಿಹೋದೀತು. ಮತ್ತೆ ನಾಳೆಗೆ ಏನು ಮಾಡುವಿರಿ ? " ಎಂದು ಕೇಳಿದಳು ಸುಲೇಮಾನ್ ಮಗಳು.

ಅರೇಬಿಯಾ ಕಥೆ



"ಈ ಹೊತ್ತಿಗೆ ಇಷ್ಟು ಆಹಾರ ಹೊಟ್ಟೆಗೆ ಹೋದರೆ ಸಾಕು. ಅದನ್ನು ತಿಂದು ಜೀವ ಉಳಿಸಿ ಕೊಂಡು ಪಟ್ಟಣಕ್ಕೆ ಹೋಗುತ್ತೇವೆ. ಅಲ್ಲಿ ನಮಗೆ ಧನವಂತರಾದ ಬಂಧುಗಳಿದ್ದಾರೆ" ಎಂದಳು ಅವಳು.

ಸುಲೇಮಾನ್ ಮಗಳು ತನ್ನಲ್ಲಿದ್ದ ಮೂರು ರೊಟ್ಟಿಗಳನ್ನು ಅವಳಿಗೆ ಕೊಟ್ಟಳು. ತಾಯಿಯೂ ಮಕ್ಕಳೂ ಅವುಗಳನ್ನು ತಿಂದು ಹಸಿವೆ ಕಳೆದು ಕೊಂಡರು.

ಆಮೇಲೆ ಆ ಬಡವೆ ಸುಲೇಮಾನ್ ಮಗಳನ್ನು ನೋಡಿ, "ನಿನ್ನ ದಯಾಗುಣಕ್ಕೆ ಸಾಟಿಯಿಲ್ಲವಮ್ಮಾ. ನಿನಗೆ ಪ್ರತ್ಯುಪಕಾರ ಮಾಡಲಿಕ್ಕೆ ನನ್ನ ಹತ್ತಿರ ಈ ಕೂಜಾದ ಹೊರತು ಬೇರೇನೂ ಇಲ್ಲ, ಇದು ಖಾಲೀ ಕೂಜಾವಲ್ಲ ತೆಗೆದುಕೋ ಅಮ್ಮ" ಎಂದು ಒಂದು ಹಳೆಯ ಕೂಜವನ್ನು ಕೊಟ್ಟಳು.

ಸುಲೇಮಾನ್ ಮಗಳು ಕೂಜವನ್ನು ಪರಿಶೀಲಿಸಿ ನೋಡಿದಳು. ಅದರೊಳಗೆ ಏನೂ ಇರಲಿಲ್ಲ. "ಈ ಕೂಜಾ ಖಾಲಿಯಾಗಿದ್ದರೂ, ಏನಾದರೂ ಇದ್ದರೂ ನಮಗೇನೂ ಇದರ ಅಗತ್ಯವಿಲ್ಲಮ್ಮಾ, ನೀವೇ ಇಟ್ಟುಕೊಳ್ಳಿ' ಎಂದಳು.

"ಇದು ಖಾಲೀ ಕೂಜಾ ಅಲ್ಲವೆಂದೆನಲ್ಲಮ್ಮಾ. ನನ್ನ ಮಾತು ಕೇಳು. ಇದನ್ನು ನೀನು ತೆಗೆದು ಕೊಂಡು ಹೋಗಲೇಬೇಕು" ಎಂದು ಒತ್ತಾಯಿಸಿದಳು ಆ ಬಡವೆ.

ಅವಳ ಮಾತನ್ನು ನಿರಾಕರಿಸಲಾಗದೆ ಸುಲೇಮಾನ್‌ನ ಮಗಳು ಆ ಕೂಜಾ ತೆಗೆದುಕೊಂಡು ಮನೆಗೆ ಹೋಗಿ, ದಾರಿಯಲ್ಲಿ ನಡೆದುದನ್ನೆಲ್ಲಾ ತಾಯಿ ತಂದೆಯರೊಂದಿಗೆ ವಿವರವಾಗಿ ಹೇಳಿದಳು.

ಅವಳು ಆ ಬಡವೆಯ ಮೇಲೆ ತೋರಿಸಿದ ಕರುಣೆಯ ಫಲಿತವಾಗಿ ಈ ಹೊತ್ತಿನಲ್ಲಿ ಅವರೆಲ್ಲಾ ಉಪವಾಸವಿರಬೇಕಾಯಿತು. ಆದರೂ ಹಾಗೆ ನಡೆದುದಕ್ಕೆ ಅವರೆಲ್ಲಾ ಚಿಂತೆಪಡಲಿಲ್ಲ. ಹಸಿವೆಯನ್ನು ಅಡಗಿಸುವಂತಹ ಒಂದು ವಿಧದ ಸಮಾಧಾನವೇ ಅವರಿಗಾಯಿತು.

ಎಲ್ಲವನ್ನೂ ಕೇಳಿದ ಸುಲೇಮಾನ್ ದೊಡ್ಡ ಮಗಳನ್ನು ನೋಡಿ, "ಒಳ್ಳೆಯ ಕೆಲಸವನ್ನೇ ಮಾಡಿದಿಯಮ್ಮಾ. ಈಗ ಈ ಕೂಜಾವನ್ನು ಮಾರಿದರೆ ಒಂದು ರೊಟ್ಟಿಯಾದರೂ ಬಂದೀತಷ್ಟೆ?" ಎಂದು ಚಿಕ್ಕ ಮಗಳ ಕಡೆಗೆ ನೋಡಿ, "ನೀನೇ ಹೋಗಿ ಈ ಕೂಜಾ ಮಾರಿ ಬಾ" ಎಂದನು.

ಚಿಕ್ಕಮಗಳು ಆ ಕೂಜಾ ತೆಗೆದುಕೊಂಡು ಸಂತೆಗೆ ಹೋಗಿ ಒಂದು ಕಡೆಯಲ್ಲಿ ಕುಳಿತಳು. ಆ ದಾರಿಯಾಗಿ ಎಷ್ಟೋ ಜನರು ಆಚೀಚೆಗೆ ಹೋದರು. ಒಬ್ಬರು ಕೂಡಾ ಆ ಕೂಜಾದ ಬೆಲೆ ಹೇಗೆಂದು ಕೇಳುವ ಪಾಪಕ್ಕೆ ಹೋಗಲಿಲ್ಲ.

ಸಾಯಂಕಾಲ ಸಂತೆ ಮುಗಿಯುವ ಹೊತ್ತಿನಲ್ಲಿ, ಒಬ್ಬ ಬೆಸ್ತರವನು ಅವಳ ಹತ್ತಿರ ಬಂದು, "ಅಮ್ಮಾ, ನನ್ನ ಬುಟ್ಟಿಯಲ್ಲಿ ಒಂದೇ ಒಂದು

ಮೀನು ಮಾತ್ರ ಉಳಿದಿದೆ. ಅಗ್ಗಕ್ಕೇ ಕೊಡುತ್ತೇನೆ. ತೆಗೆದುಕೊಳ್ಳುವಿಯಾ ? " ಎಂದು ಕೇಳಿದನು.

"ಆ ಮೀನು ತೆಗೆದುಕೊಳ್ಳಲಿಕ್ಕೆ ನನ್ನ ಹತ್ತಿರ ದುಡ್ಡೇ ಇಲ್ಲ. ಬೇಕಾದರೆ ಈ ಕೂಜಾ ತೆಗೆದು ಕೊಂಡು ಆ ಮೀನು ಕೊಡುವುದಾದರೆ ತೆಗೆದು ಕೊಳ್ಳುತ್ತೇನೆ" ಎಂದಳು ಚಿಕ್ಕಮಗಳು.

ಬೆಸ್ತನು ಕೂಜಾದ ಕಡೆಗೆ ಸ್ವಲ್ಪಹೊತ್ತು ನೋಡಿ, ಸಿಕ್ಕಿದಷ್ಟು ಲಾಭವೆಂದುಕೊಂಡು ಮೀನನ್ನು ಅವಳಿಗೆ ಕೊಟ್ಟು ಕೂಜಾ ತೆಗೆದುಕೊಂಡು ಹೊರಟುಹೋದನು.

ಅವಳು ಮೀನನ್ನು ಮನೆಗೆ ತಂದು ತನ್ನ ತಾಯಿಯ ಕೈಗೆ ಕೊಟ್ಟಳು. ತಾಯಿ ಮೀನನ್ನು ಅಡಿಗೆ ಮಾಡಲು ಎರಡು ತುಂಡಾಗಿ ಕೊಯಿದಾಗ ಅದರ ಹೊಟ್ಟೆಯೊಳಗಿನಿಂದ ಥಳಥಳಿಸುವ ಒಂದು ಮುತ್ತು ಈಚೆಗೆ ಬಿತ್ತು. ಅದನ್ನು ನೋಡಿ, ಎಲ್ಲರಿಗೂ ಅತ್ಯಾಶ್ಚರ್ಯವೂ ಆನಂದವೂ ಆಯಿತು.

ಸುಲೇಮಾನ್ ಮರುದಿನ ಬೆಳಿಗ್ಗೆ ಬೇಗನೆದ್ದು ಪ್ರಾತಃಕೃತ್ಯ ತೀರಿಸಿಕೊಂಡು, ತನ್ನ ಚಿಕ್ಕಂದಿನ ಸ್ನೇಹಿತನಾದ ಒಬ್ಬ ನಗಗಳ ವ್ಯಾಪಾರಿಯ ಬಳಿಗೆ ಹೋಗಿ ಆ ಮುತ್ತನ್ನು ತೆಗೆದು ತೋರಿಸಿದನು.

ವ್ಯಾಪಾರಿ ಮುತ್ತನ್ನು ಪರೀಕ್ಷಿಸಿ ನೋಡಿ, "ಇಂತಹ ಮೇಲ್ತರಗತಿಯ ಮುತ್ತನ್ನು ನಾನು ಇಷ್ಟರವರೆಗೂ ನೋಡಲಿಲ್ಲ. ನನಗಿಂತಲೂ ದೊಡ್ಡ ತರಗತಿಯ ವಜ್ರಗಳ ವ್ಯಾಪಾರ ಮಾಡುವ ನನ್ನ ಮಿತ್ರನೊಬ್ಬನಿದ್ದಾನೆ. ಅವನ ಬಳಿಗೆ ಹೋಗೋಣ ನಡೆ" ಎಂದು ಸುಲೇಮಾನನನ್ನು ಕರೆದುಕೊಂಡು ಅಲ್ಲಿಗೆ ಹೋದನು.

ಆ ವಜ್ರದ ವ್ಯಾಪಾರಿ ಮುತ್ತನ್ನು ತೆಗೆದು ಕೊಂಡು ಬಹುದೊಡ್ಡ ಸಂಖ್ಯೆಯ ಹಣದ ಚೀಲವನ್ನು ಸುಲೇಮಾನನಿಗೆ ಕೊಟ್ಟನು.

ಹೀಗೆ ಸಿಕ್ಕಿದ ಧನದಿಂದ ಸುಲೇಮಾನನ ಕಷ್ಟ ಗಳು ತೀರಿಹೋದವು. ಇಬ್ಬರು ಕುಮಾರಿಯರಿಗೂ ಒಳ್ಳೆಯ ಸಂಬಂಧ ನೋಡಿ ವೈಭವದಿಂದ ಮದುವೆ ಮಾಡಿದನು.

ಒಂದು ದಿನ ಸುಲೇಮಾನ್ ಇಬ್ಬರು ಮಗಳಂದಿರು ಮತ್ತು ಅಳಿಯಂದಿರೊಂದಿಗೆ ಔತಣದ ಊಟ ಮಾಡುತ್ತಾ, "ಆ ಬಡವೆ ಹೇಳಿದ ಮಾತಿನ ರಹಸ್ಯವು ಈಗತಾನೇ ನನಗೆ ಗೊತ್ತಾಗುತ್ತಿದೆ. ಅವಳು ಕೊಟ್ಟ ಕೂಜಾ ನಿಜಕ್ಕೂ ಖಾಲಿ ಯಾದುದಲ್ಲ. ಅದರ ತುಂಬಾ ಅವಳ ಒಳ್ಳೆಯ ಮನಸ್ಸಿನ ಕೃತಜ್ಞತೆ ತುಂಬಿಕೊಂಡಿದ್ದಿತು. ಅದರ ಕಾರಣದಿಂದಾಗಿಯೇ ನಮ್ಮ ಕಷ್ಟಗಳು ತೊಲಗಿ ಇಂತಹ ಅದೃಷ್ಟದ ದಿನಗಳು ಬಂದಿವೆ" ಎಂದನು ಬಹಳ ಕೃತಜ್ಞತೆಯ ಹೃದಯದಿಂದ.





# ವೀರಾಧಿ ವೀರ

**ಪೂ**ರ್ವದ ಒಂದು ಕಾಲದಲ್ಲಿ ಕಳಿಂಗ ದೇಶಕ್ಕೂ, ವಂಗ ದೇಶಕ್ಕೂ ನಡುವಿನ ಸರಿಹದ್ದಿನಲ್ಲಿ ಒಂದು ದೊಡ್ಡ ಕೋಟೆಯಿದ್ದಿತು. ಅದು ಕೋಟೆಯ ಹಾಗೆಯೇ ಪ್ರಹರಿ ಗೋಡೆಗಳಿಂದಲೂ, ಬುರುಜುಗಳಿಂದಲೂ ಎದ್ದುಕಾಣುತ್ತಿತ್ತು. ಆದರೆ ಅದು ಬಲಿಷ್ಠವಾದ ಕೋಟೆಯೇನೂ ಅಲ್ಲ. ನಿಜವಾದ ಸೇನೆಗಳು ಬಂದು ಮುತ್ತಿಗೆ ಹಾಕಿದರೆ ಅದು ಸ್ವಲ್ಪವೂ ಪ್ರಯೋಜನಕ್ಕೆ ಬರುವಂತಹುದಲ್ಲ.

ಆ ಕೋಟೆಯಲ್ಲಿ ಜಿತವರ್ಮನೆಂಬ ಅರೆಮರುಳನೊಬ್ಬನು ದುರ್ಗಾಧೀಶನಾಗಿ ವಾಸಮಾಡಿಕೊಂಡಿದ್ದನು. ಅವನ ಪೂರ್ವಿಕರು ಒಂದು ಕಾಲದಲ್ಲಿ ಚೆಂದಾಗಿ ರಾಜ್ಯಭಾರ ವಹಿಸಿ ನಡೆಸಿದವರಾಗಿದ್ದರು. ಆದುದರಿಂದ ಜಿತವರ್ಮನು ತಾನು ಕೂಡಾ ಒಬ್ಬ ಮಹಾವೀರನಾದ ರಾಜನೇ ಎಂದುಕೊಂಡು ವಿಹರಿಸುತ್ತಿದ್ದನು. "ನಮ್ಮನ್ನು ನೋಡಿದರೆ ಎಂತೆಂಥವರಿಗೂ ಎದೆ ನಡುಕ ಬರುತ್ತದೆ. ಆದುದರಿಂದಲೇ ನಮ್ಮ ಕೋಟೆಯ ಕಡೆಗೆ ಯಾರೂ ದಂಡೆತ್ತಿ ಬರುವುದಿಲ್ಲ. ಅರ್ಜುನ ಕರ್ಣರಂಥಾ ವೀರಾಧಿವೀರರೇ ಬಂದರೂ ಸಹ ನಮ್ಮ ಪ್ರತಾಪಕ್ಕೆ ತಡೆದುಕೊಳ್ಳಲಾರರು" ಎಂದು ಜಿತವರ್ಮನು ಪ್ರಗಲ್ಭ ಹೇಳಿಕೊಳ್ಳುತ್ತಿದ್ದನು. ಹೌದು ಹೌದೆಂದು ಅವನ ಚೇಲಾಗಳು ಅವನ ಮಾತಿಗೆ ತಾಳ ಹಾಕುತ್ತಿದ್ದರು.

ಸುತ್ತಮುತ್ತಲಿನವರು ಅವನ ಪ್ರತಾಪವನ್ನು ನಂಬಿದಂತೆ ನಟಿಸುತ್ತಾ, ಹೌದು ಹೌದೆನ್ನುತ್ತಾ, ಮರೆಯಲ್ಲಿ ನಗುತ್ತಿರುವರು.

ತನ್ನ ಪ್ರತಾಪವನ್ನು ನಿರೂಪಿಸಲಿಕ್ಕಾಗಿ ಜಿತವರ್ಮನು ಆಗಾಗ ಕೆಲವುಂದಿ ವೀರರನ್ನು ಕರೆದುಕೊಂಡು ಯಾವ ಜಮೀನ್ದಾರರ ಆಸ್ತಿಯ ಮೇಲೆಯೋ ಬಿದ್ದು ದೋಚಿಕೊಂಡು ಹೋಗಲು ಪ್ರಯತ್ನಿಸುತ್ತಿದ್ದನು. ಯಾವ ಕೋಳಿಗಳನ್ನೋ ಕುರಿಗಳನ್ನೋ ಎತ್ತಿಕೊಂಡು ಹೋದರೆ ಜಮೀನ್ದಾರರು ಹೆಚ್ಚು ಲಕ್ಷ್ಯಕೊಡದೆ, ಇವನೊಬ್ಬ ಗತಿಗೇಡಿನ ಬೊಂಬೇ ರಾಜ ಎಂದುಕೊಂಡು ಸುಮ್ಮನಿರುವರು. ಜಿತವರ್ಮನು ಅದಕ್ಕಿಂತ ಹೆಚ್ಚಿನ ಕೊಳ್ಳೆಗೆ ಪ್ರಯತ್ನಿಸಿದರೆ ಜಮೀನ್ದಾರರು ತಮ್ಮ ನೌಕರರನ್ನು ಕಳುಹಿಸಿ ಜಿತವರ್ಮನನ್ನೂ ಅವನ ಅನುಚರರನ್ನೂ ಹೊಡೆಯಿಸುವರು. ಹಾಗೆ ಪೆಟ್ಟು ತಿಂದು ಬಂದ ಜಿತವರ್ಮನು, "ಹೇಡಿ ಹಂದಿಗಳು! ಧೈರ್ಯ



ವಿದ್ದರೆ ಅವರೇ ಬಂದು ನನ್ನ ಹತ್ತಿರ ಮುಖಾಮುಖೀ ಯುದ್ಧ ಮಾಡಬೇಕು. ಬರೀ ಪೊಳ್ಳು ಮನುಷ್ಯರನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸುತ್ತಾರೆ. ಅಂತಹ ಅಲ್ಪರೊಂದಿಗೆ ನಾನು ಯುದ್ಧ ಮಾಡುವೆನೆ? ಛೀ ಛೀ!" ಎಂದು ಹೆಚ್ಚಳಿಸಿಕೊಂಡೇ ಹೇಳುವನು.

ಜಿತವರ್ಮನು ಕೊಳ್ಳೆ ಹೊಡೆಯಲು ಹೋಗಿ ಪೆಟ್ಟು ತಿಂದು ಬಂದಾಗ ಅವನ ಹೆಂಡತಿ ಅವನ ಬೆನ್ನಿನಲ್ಲಿರುವ ಗಾಯಗಳಿಗೆ ಮದ್ದು ಹಚ್ಚಿ ತಿಕ್ಕುವಳು. ತನ್ನ ಗಂಡನು ಒಬ್ಬ ಅರೆಮರುಳನೆಂದು ಅವಳಿಗೆ ಗೊತ್ತಿತ್ತು. ಆದರೆ ಗಂಡನಿಗೆ ಸಂತೋಷವಾಗುವಂತೆ ಅವಳು ನಡೆಯಬೇಕಿತ್ತು. ಅಂತಲೇ ಅವಳು "ಎಂಥ ನೀಚರಪ್ಪ! ಎಲ್ಲಾ ಗಾಯಗಳೂ ಬೆನ್ನಿನಲ್ಲೇ ಇವೆ! ವೀರರಾದರೆ ಮುಂದೆ ನಿಂತು ತಾನೇ ಹೊಡೆಯಬೇಕು? ಹಿಂದೆ ನಿಂತು ಹೊಡೆಯುವವರು ಕೆಟ್ಟ ಹೇಡಿಗಳು!" ಎನ್ನುವಳು.

"ನನ್ನ ಇದಿರಿಗೆ ಬರಲು ಅವರಿಗೆ ಗುಂಡಿಗೆ ಅಂತ ಒಂದು ಇದ್ದರೆ ತಾನೇ?" ಎನ್ನುವನು ಜಿತವರ್ಮ.

ಒಂದು ದಿನ ಬೆಳಿಗ್ಗೆ ಒಂದು ವಿಚಿತ್ರವು ನಡೆಯಿತು. ಕೋಟೆಯ ಬುರುಜಿನಲ್ಲಿ ಕಾವಲು ಕಾಯುತ್ತಿದ್ದ ನೌಕರನು ಬೇಗ ಬೇಗನೆ ಕೆಳಗಿಳಿದು ಬಂದು ಜಿತವರ್ಮನೊಂದಿಗೆ "ದೊರೆಗಳೇ! ದೊಡ್ಡ ಸೈನ್ಯ! ಬಹು ದೊಡ್ಡ ಸಾವಿರಾರು ಸಂಖ್ಯೆಯ ಸೈನ್ಯ ನಮ್ಮ ಕೋಟೆಯ ಕಡೆಗೆ ಬರುತ್ತಿದೆ! ಆಕ್ರಮಿಸಲಿಕ್ಕೇ ಬರುತ್ತಿದ್ದಾರೆ! ದೊರೆಗಳು ತ್ವರೆ ಮಾಡಬೇಕು!" ಎಂದು ಅವಸರದಿಂದ ತೇಕುತ್ತಾ ಹೇಳಿದನು.

ಜಿತವರ್ಮನು ಬಲವಾಗಿ ಹೂಂಕಾರ ಮಾಡಿ, ಬುರುಜಿನ ಮೇಲೆ ಹೋಗಿ ನೋಡಿದನು. ಕಳಿಂಗ ದೇಶದ ದೊಡ್ಡ ಸೇನೆಯೊಂದು ಆ ಕಡೆಗೆ ಬರುತ್ತಿರುವುದನ್ನು ನೋಡಿದನು. ಆ ಸೇನೆಯಲ್ಲಿ ರಥಗಳೂ ಆನೆಗಳೂ, ಕುದುರೆಗಳೂ, ಪದಾತಿಗಳೂ ಅನೇಕ ಸಂಖ್ಯೆಯಲ್ಲಿದ್ದುವು. ಒಟ್ಟಿಗೆ ಸುಮಾರು ಅರುವತ್ತು ಸಾವಿರವಿರಬಹುದು.

ಜಿತವರ್ಮನು ತನ್ನ ನೌಕರರೆಲ್ಲರನ್ನೂ ಕೂಗಿ ಕೂಗಿ ಕರೆದು, "ನೋಡಿದಿರಾ! ಕೇಳಿರಿ! ಈ ದಿನವೇ ನನಗೆ ಸುದಿನ! ಅಲ್ಪರಾದ ಕಳಿಂಗರು ನಮ್ಮ ಕೋಟೆಯನ್ನು ಹಿಡಿಯಲು ಬರುತ್ತಾರೆ! ನಮ್ಮ ಬಿಲ್ಲು ಬಾಣ ಈಟಿಗಳನ್ನೆಲ್ಲಾ ಕೋಟೆ ಬುರುಜಿನ ಮೇಲೆ ಇಡಿರಿ! ನಾನು ಒಬ್ಬನೇ ಈ ಸೇನೆಯನ್ನೆಲ್ಲ ನಾಶಮಾಡಿ ವಿಜಯಲಕ್ಷ್ಮಿಯನ್ನು ವರಿಸುತ್ತೇನೆ, ಕಳಿಂಗ ರಾಜನನ್ನು ನನ್ನ ಸಾಮಂತನನ್ನಾಗಿ ಮಾಡುತ್ತೇನೆ. ಅವನಿಗೆ ಇಷ್ಟು ಗರ್ವ ಬಂತೇ! ಇದು ಅವನಿಗೆ ಹೋಗುವ ಕಾಲ! ಹುಂ" ಎಂದು ಅಟ್ಟಹಾಸದ ನೃತ್ಯ ಮಾಡಿದನು.

ಕಳಿಂಗ ಸೇನೆಗಳು ಜಿತವರ್ಮನೊಂದಿಗೆ ಯುದ್ಧ ಮಾಡಲಿಕ್ಕೆ ಬಂದಿತೆಂದು ಬೇಗನೇ ಗೊತ್ತಾಯಿತು.



ಆ ಸೇನೆಗಳು ಕೋಟೆಯ ಸಮೀಪ ಬಂದು ಸಾಲು ಗಟ್ಟಿ ನಿಂತುವು. ಸೇನಾಧಿಪತಿ ಕುದುರೆಯ ಮೇಲೇರಿಕೊಂಡು ಕೋಟೆಯ ಬದಿಗೆ ಬಂದು ತಲೆ ಯೆತ್ತಿ ಬುರುಜಿನ ಮೇಲಿರುವ ಜಿತವರ್ಮನನ್ನು ನೋಡಿ, "ಈ ಕೋಟೆಯೊಳಗಿರುವ ಪರಾಕ್ರಮ ಶಾಲಿ ಯಾರು?" ಎಂದು ಕೂಗಿ ಕೇಳಿದನು.

"ಕೇಳುವುದೇನು ನೀನು? ಅಂಥವನು ನಾನೇ?" ಎಂದನು ಜಿತವರ್ಮ ಎದೆಯುಬ್ಬಿಸಿ.

"ಹಾಗಾದರೆ ಕೂಡಲೇ ನಿಮ್ಮ ಕೋಟೆಯ ಬಾಗಿಲು ತೆರೆದು ನಮ್ಮ ವಶಕ್ಕೆ ಬಿಟ್ಟುಬಿಡಿ! ಇಲ್ಲದಿದ್ದರೆ ಯುದ್ಧದಲ್ಲಿ ನಿಮ್ಮನ್ನೂ, ನಿಮ್ಮ ಕೋಟೆ ಯನ್ನೂ ನೆಲಸಮ ಮಾಡಿಬಿಡುತ್ತೇವೆಂದು ತಿಳಿಯಿರಿ. ಕಳಿಂಗ ದೇಶದ ರಾಜನ ಆಜ್ಞೆಯ ಮೇರೆಗೆ ನಾವು ಈ ವಂಗ ದೇಶವನ್ನು ಜಯಿಸಿಕೊಳ್ಳಲು ಬಂದಿದ್ದೇವೆ. ದಿಗ್ವಿಜಯಕ್ಕೆ ಬಂದವರು ನಾವು!" ಎಂದು ಹೇಳಿದನು ಕಳಿಂಗ ಸೇನಾಧಿಪತಿ.

"ಓಹೋ! ನೀಚನೇ! ಏನು ನಿನ್ನ ಸೊಕ್ಕು! ನೋಡು! ನಿನ್ನನ್ನೂ ನಿನ್ನ ಸೇನೆಯನ್ನೂ ಧೂಳೀ ಧೂಪಟ ಮಾಡಿಬಿಡುತ್ತೇನೆ. ನಿಮ್ಮ ದಿಗ್ವಿಜಯ ಇಲ್ಲಿಗೆ ಪರಿಸಮಾಪ್ತಿ! ಏನೆಂದುಕೊಂಡಿ ಈ ದುರ್ಗಾ ಧೀಶ ಜಿತವರ್ಮನನ್ನು?" ಎಂದು ಗರ್ಜಿಸಿ ಜಿತ ವರ್ಮನು ಆ ಸೇನಾಧಿಪತಿಯ ಮೇಲೆ ಒಂದು ಬಾಣವನ್ನು ಪ್ರಯೋಗಿಸಿದನು. ಆ ಬಾಣವು ಸೇನಾ ಧೀಶನ ಮುಂದೆ ಎಲ್ಲಿಯೋ ಬಿದ್ದಿತು.

ಕೂಡಲೇ ಸೇನಾಧಿಪತಿಯ ಸಂಜ್ಞೆಯಂತೆ ಕೆಲವು ಸೈನಿಕರು ಕೋಟೆಯ ಬುರುಜಿನ ಕಡೆಗೆ ಕೆಲವು ಬಾಣಗಳನ್ನು ಬಿಟ್ಟರು. ಜಿತವರ್ಮನೂ ತನ್ನ ಸೈನಿಕರಿಂದ ಕೆಳಗಿನವರ ಮೇಲೆ ಬಾಣ ಪ್ರಯೋಗ ಮಾಡಿಸಿದನು. ಅವನ ಕಡೆಯವರ ಬಾಣಗಳಾಗಲಿ, ಕಳಿಂಗರ ಬಾಣಗಳಾಗಲೀ ಯಾವ ಹಾನಿಯನ್ನೂ ಮಾಡಲಿಲ್ಲ. ಯಾರನ್ನೂ ಕೊಲ್ಲಲಿಲ್ಲ.

ಹೀಗೆ ಸುಮಾರು ಒಂದು ಗಂಟೆ ಹೊತ್ತು ಯುದ್ಧ ನಡೆದ ಮೇಲೆ ಕಳಿಂಗನ ಸೇನೆಗಳು ಹಿಂದೆ ಸರಿದುವು. "ಹೇಡಿಗಳು, ಹಿಂದೆ ಓಡುತ್ತಾರೆ! ನನ್ನ ಪ್ರತಾಪದ ರುಚಿ ನೋಡುವ ಭಾಗ್ಯ ಅವರಿಗಿಲ್ಲ!" ಎಂದು ಜಿತವರ್ಮನು ತನ್ನ ಭಟರೊಂದಿಗೆ ಹೆಮ್ಮೆ ಯಿಂದ ಹೇಳಿದನು.

ಆದರೆ ಕಳಿಂಗ ಸೇನೆಗಳು ಪೂರ್ತಿ ಹಿಂದೆ ಹೋಗ ಲಿಲ್ಲ. ಕೋಟೆಗೆ ಅಷ್ಟು ದೂರದ ಜಾಗದಲ್ಲಿ ಶಿಬಿರ ಹಾಕಿಕೊಳ್ಳುವ ಕೆಲಸಕ್ಕೆ ತೊಡಗಿದರು. ದಿನಾ ಬೆಳಗ್ಗಿನ ಹೊತ್ತಿನಲ್ಲಿ ಒಂದರ್ಧ ಗಂಟೆಯೂ, ಸಾಯಂಕಾಲದಲ್ಲಿ ಅರ್ಧ ಗಂಟೆಯೂ ಸ್ವಲ್ಪ ಸೈನಿಕರು ಮಾತ್ರ ಮುಂದೆ ಹೋಗಿ ಕೋಟೆ ಗೋಡೆಯ ಮೇಲೆ ಬಾಣಗಳ ಪ್ರಯೋಗ ಮಾಡಿ ಹಿಂದಿರುಗುತ್ತಿದ್ದರು.

ಹೀಗೆ ಹತ್ತು ದಿನಗಳು ನಡೆದ ಮೇಲೆ ಕಳಿಂಗ ಸೇನಾಧಿಪತಿ ತನ್ನ ಕುದುರೆಯ ಮೇಲೆ ಕೋಟೆಯ

ಸಮೀಪ ಬಂದು, " ಅಯ್ಯಾ, ಜಿತವರ್ಮಾ ! ನಾವು ಯುದ್ಧದಲ್ಲಿ ಸೋತಿದ್ದೇವೆ. ನಾವು ಸಂಧಿ ಮಾಡಿಕೊಳ್ಳಲು ಸಿದ್ಧರಾಗಿದ್ದೇವೆ. ದಯಮಾಡಿ ಕೋಟೆಯ ಬಾಗಿಲು ತೆರೆಯಿರಿ " ಎಂದು ಕೂಗಿ ಹೇಳಿದನು.

" ಈ ಕೆಲಸ ಆಗಲೇ ಮಾಡಬೇಕಿತ್ತು ! ನಮಗೂ ಬಹಳ ಶ್ರಮ ತಗ್ಗುತ್ತಿತ್ತು " ಎನ್ನುತ್ತ ಜಿತವರ್ಮನು ಕೋಟೆಯ ಬಾಗಿಲನ್ನು ತೆರೆಯಿಸಿ ಶತ್ರು ಸೇನಾಧಿಪತಿಯನ್ನು ಒಳಗೆ ಬರಗೊಳಿಸಿದನು.

" ಇನ್ನು ಮೇಲೆ ಕಳಿಂಗ ರಾಜನು ವಂಗದ ಸಾಮಂತನಾಗಿ ಕಪ್ಪ ಕಟ್ಟುತ್ತಾನಷ್ಟೇ ? " ಎಂದು ಜಿತವರ್ಮನು ಸೇನಾಧಿಪತಿಯನ್ನು ಕೇಳಿದನು.

" ಆ ಮಾತು ಈಗಲೇ ಅಲ್ಲ. ಪ್ರಸ್ತುತದಲ್ಲಿ ನಮ್ಮ ಸೇನೆಯಲ್ಲಿ ಅರ್ಧದಷ್ಟು ಯುದ್ಧದಲ್ಲಿ ಸತ್ತು ಹೋದ ಹಾಗೆ, ಉಳಿದ ಅರ್ಧದಲ್ಲಿ ಒಂದು ಭಾಗದವರು ನಿಮ್ಮ ಖೈದಿಗಳಾದ ಹಾಗೆ ಪತ್ರ ಬರೆದು ಕೊಡಿರಿ " ಎಂದನು ಕಳಿಂಗ ಸೇನಾಧಿಪತಿ.

ಹಾಗೆ ಜಿತವರ್ಮನಿಂದ ಪತ್ರ ಬರೆಸಿ ತೆಗೆದುಕೊಂಡು ಕಳಿಂಗ ಸೇನಾಧಿಪತಿ ವಂಗ ರಾಜನ ಬಳಿಗೆ ಹೋದನು. ನಿಜ ಸಂಗತಿ ಏನೆಂದರೆ, ಕಳಿಂಗ ರಾಜ್ಯವನ್ನು ವಶಪಡಿಸಿಕೊಳ್ಳಲಿಕ್ಕಾಗಿ ಆ ಸೇನಾಧಿಪತಿಯಿಂದ ಒಂದು ತಂತ್ರವು ನಡೆದಿತ್ತು. ವಂಗ ರಾಜ್ಯವನ್ನು ಜಯಿಸಿ ಬರುತ್ತೇನೆಂದು ಹೇಳಿ ಕಳಿಂಗ ಸೇನಾಧಿಪತಿ ಸೇನೆಯೊಂದಿಗೆ ಕೂಡಿಬಂದು, ಸರಿಹದ್ದಿನಲ್ಲಿದ್ದ ಮೊದಲನೇ ಕೋಟೆಯ ಮೇಲೆ ಯುದ್ಧ ಮಾಡಿದಂತೆ ನಾಟಕವಾಡಿದನು. ತನ್ನ ಸೇನೆಯ ಬಹು ಭಾಗವು ನಾಶವಾಗಿ ಹೋದಂತೆ ಜಿತವರ್ಮನ ಕೈಯಿಂದ ಪತ್ರವನ್ನು ತೆಗೆದುಕೊಂಡು ಆ ಸೈನ್ಯವನ್ನು ವಂಗರಾಜನ ವಶಕ್ಕೆ ಕೊಟ್ಟು, ಸ್ವಲ್ಪ ಮಾತ್ರ ಸೈನ್ಯದೊಂದಿಗೆ ತನ್ನ ದೇಶಕ್ಕೆ ಹಿಂದಿರುಗಿ ಹೋದನು. ಮತ್ತೆ ಸ್ವಲ್ಪಕಾಲದಲ್ಲಿ ವಂಗ ಸೇನೆಗಳು ಕಳಿಂಗ ರಾಜ್ಯವನ್ನು ಮುತ್ತಿ ಜಯಿಸಿದುವು. ಆ ಸೇನಾಧಿಪತಿಯೇ ಕಳಿಂಗ ರಾಜನಾದನು.

ಇದಾವುದೂ ಜಿತವರ್ಮನಿಗೋ, ಸರಹದ್ದಿನಲ್ಲಿರುವವರಿಗೋ ತಿಳಿಯದು. ಜಿತವರ್ಮನು ಮಹಾ ಯೋಧನೆಂದು, ತನ್ನ ಮೇಲೆ ದಂಡೆತ್ತಿ ಬಂದ ಕಳಿಂಗ ಸೇನೆಯನ್ನು ಒಬ್ಬಂಟಿಗನಾಗಿ ನಾಶ ಮಾಡಿದನೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಜಿತವರ್ಮನು ಕೂಡಾ ತನ್ನಿಂದಲೇ ಕಳಿಂಗ ಸೇನೆಯ ಅರ್ಧಕ್ಕೂ ಹೆಚ್ಚಿನ ಭಾಗವು ನಾಶವಾಯಿತೆಂದು ನಂಬಿದನು. ಈ ಯುದ್ಧವನ್ನು ಕಣ್ಣಾರೆ ನೋಡಿದವರು ಇಲ್ಲದೆ ಹೋದುದರಿಂದ ನಿಜಸಂಗತಿ ಏನೆಂದು ಯಾರಿಗೂ ತಿಳಿಯದೆ, ಜಿತವರ್ಮನು ಮಹಾ ವೀರನಾಗಿಯೇ ಚಲಾವಣೆಯಾಗಿ, ಆ ಕೋಟೆಯ ಅಧಿಪತಿಯಾಗಿದ್ದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೬ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Pranlal K. Patel



A. L. Syed

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಏಪ್ರಿಲ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಈಗ ನಾನೇ ಈಶ್ವರ

ಎರಡನೇ ಫೋಟೋ : ಇಗೋ ನಿನಗೆ ನಮಸ್ಕಾರ

ಕಳುಹಿಸಿದವರು : ಭೀಮರಾವ್, ಐ. ಪಿ. ಎಮ್. ಸಿ, ಮಧುಗಿರಿ, ತುಮಕೂರು ಜಿಲ್ಲೆ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ೭೦–೮೦ ಸಾರಿ. ೨. ೧೯೬೭ ನೇ ಸಂವತ್ಸರದಲ್ಲಿ. ೩. ಹೆಚ್ಚು ಕಡಿಮೆ ೧೪೦೦ ಕ್ಯೂಬಿಕ್ ಸೆಂಟಿಮೀಟರ್. ೪. ನೂರಿಪ್ಪತ್ತು ದಿನಗಳು. ೫. ಪೆನ್ಸಿಲಿನ್ ಕಂಡುಹಿಡಿದರು.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.